ಸಾಯಂಕಾಲ : ದಯಾಭದ್ರರೆಂಬ ರಿಸಿಯರ್ . . . ಜಿನಾಲಯ ದೊಳಾಷಾಢಮಾಸದ ಚತುರ್ದಶಿಯ ದಿವಸದಂದು ಪಱಿವೊೞ್ತು ಬಂದು ಜೋಗುಗೊಂಡಿರ್ದರ್ (ವಡ್ಡಾರಾ. ೨೬-೨೪). [ಪಱಿ$_1$ + ಪೊೞ್ತು]

**ಪೞ$_1$,** ಪೞ$_1$, ಪೞೆ, ಪಱಿ, ಹೞ$_1$, ಹೞೆ, ಹೞ, ಹಱಿ (ಸಪೂರೂ). 'ಪೞದು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಪೞಗನ್ನಡ', 'ಪೞಗಲಿ' ಪರಾ. **ಪೞ$_1$ :** 'ಪೞಗಬ್ಬಿಗ' ಪರಾ. **ಪೞೆ :** 'ಪೞೆಗನ್ನಡ', 'ಪೞೆವಾತು' ಪರಾ. **ಪಱಿ :** 'ಪಱಿನವಿರ್' ಪರಾ. **ಹೞ$_1$ :** 'ಹೞಗನ್ನಡ', 'ಹೞವಾತು' ಪರಾ. **ಹೞೆ :** 'ಹೞೆಗನ್ನಡ', 'ಹೞೆವರ' ಪರಾ. **ಹೞ :** 'ಹೞಗೂಂಟಣಿ' ಪರಾ. **ಹಱಿ :** 'ಹಱಿಗೂೞ್' ಪರಾ.

**ಪೞ$_2$** (ನಾ). ( ? ) : ದೇಗುಲಂ ಮಾಡಿಸಿ ಈ ಕಟ್ಟಂ ಪಡಿಸಲಿಸಲೆಂದು ಕೊಟ್ಟುದು ಯಿಾ ಪೞಂ (ಎಕ. VII, ಶಿಕಾರಿ. ೨೮೪-೨ ; 902). [ ? ]

**ಪೞಅಲಗು** (ನಾ). ಹಳೆಯ ಖಡ್ಗಧಾರೆ,-ಕತ್ತಿಯ ಬಾಯಿ : ಪೊಸಸುಗ್ಗಿ, ಪೊಸಅಡಕೆ, ಪೞಗೞವೆ, ಪೞಅಲಗು (ಭಾಷಾಭೂ. ೧೪೪ ಪ್ರಯೋ). [ಪೞ$_1$(<ಪೞದು) + ಅಲಗು$_2$]

**ಪೞಏಱು** (ನಾ). ಹಳೆಯ ಏರಿ,-ಒಡ್ಡು : ಅಗ್ನೇಯದ ದೆಸೆಗೆ ಸೀಮೆ ಕುಳಪ್ಪ್ರಗೆಱೆಯ ಒಳಗಣ ಪೞಏಱುಯೆ (ಎಕ. IX ( S ), ಬೆಂಗಳೂ. ೧೫೧-೩೫ ; 828). [ಪೞ$_1$(<ಪೞದು) + ಏಱು(<ಏರಿ$_1$)]

**ಪೞಂಗಾಸು** (ನಾ). ( ? ) : ಪೞಂಗಾಸಿನ ಪೊನ್ನ ಗಂಟೆಯವೊಲೊಪ್ಪಿ ದುದುದ್ಗತಭಾನುಮಂಡಲಂ (ಅಜಿತ. ೬-೭೦). 'ಪದಂಗಾಸು$_2$' ಪರಾ.

[IP ಇದು ತಮಿೞಿನ 'ಪೞಙ್ಕಾಸು'(=ಹಳೆಯ ಕಾಲದ ನಾಣ್ಯ), ಎಂಬುದಕ್ಕೆ ಸಂಬಂಧಿಸಿರಬಹುದು]

**ಪೞಕ** 'ಪಟಹ' ನೋ.

**ಪೞಗ$_1$,** ಪೞಗ (ನಾ). ಒಣಗಿದ ಎಲೆ ; ತರಗೆಲೆ : "ಪೞಗಂ= ಒಣಗಿದೆಲೆ" (ಶಮದ. ಪರಿ. ೧) ; "ಪೞಗಮೆನಲೊಣಗಿದೆಲೆ" (ಸಂಜೀವ. ೪); ನಡೆಗೆಟ್ಟು ತಡೆವಟ್ಟು ಕೊೞಗಂ ಪೞಗದ ನೆರೆಯ ಮಱಿಯಱಿಯೊಳ್ ತಾಂಟಿದತ್ತು (ರಾಮಾಶ್ವ. ೧೩೫-೨೪). **ಪೞಗ :** ಪೞಗಂ ತಿಂದಿರ್ಪ ನೀಡುಂ ಪಸಿದುರೆ ಮರುದಾಹಾರದಿಂದೊಪ್ಪಿ ತೋರ್ಪ (ಪಾಪ್ರಾಶ. ೯೬) ; ಕೆಂದಳಿರ ನಳನಳಿಕೆ ಪೞಗಂಗಳುದಿರ್ವ ದನಿ (ಸಂಸಪ. ೩೧-೨).

[ದೇ.॥ ತಮಿ. ಪೞುಪ್ಪು = ಹಣ್ಣಾದ ಎಲೆ]

**ಪೞಗ$_2$** (ನಾ). ಪಟಹವಾದ್ಯವನ್ನು ಬಾರಿಸುವವನು : ಪಱಿಯವರಲ್ಲಿಗೆ ವಂದವರೊಳ್ ಸಂಭಾಷಿಸುತಮಿರ್ದು ಪ[ೞಗ]ನ ಕಯ್ಯ ಪಟಹಮಂ [ಕೊಂ]ಡು ಬಾಜಿಸುತಿರ್ದಂ (ಬಂಹರಿ. ೫-೧೨ ವ).

[<ಪಟಹ + -ಗ$_2$]

**ಪೞಗನ್ನಡ,** ಪೞೆಗನ್ನಡ, ಹೞಗನ್ನಡ, ಹೞೆಗನ್ನಡ (ನಾ). ಪ್ರಾಚೀನವಾದ ಕನ್ನಡ : ಪೞಗನ್ನಡಮಂ ಪೊಲಗಿಡಿಸಿ ನುಡಿವರಾಗವು ಬಲಹೀನರ್ (ಕವಿ... ೧-೪೮) ; ಪೞಗನ್ನಡಂ ಪುದುಂಗೊಳೆ ಕೊೞಿ ಸಕ್ಕದಮಂ ತಗುಳ್ಚಿ ಜಾಣ್ ಕಿಡೆ ಮುತ್ತಂ ಮೆಟಿಸಂ ಕೋದಂತಿರೆ ಪೇೞ್ವಱುಗವಿಗಳ ಕವಿತೆ ಬುಧರನೆರ್ದೆಗೊಳಿಸುಗುಮೇ (ಕಾವ್ಯಾವ. ೫೫). **ಪೞೆಗನ್ನಡ :** ಒಳುಗನ್ನಡ ಬೆಳುಗನ್ನಡ ಪೞೆಗನ್ನಡ ದೇಶಿಯಂಗಳಾ ಕನ್ನಡಮಂ ತಿಳಿ (ಕವಿಜಿ. ೪-೨). **ಹೞಗನ್ನಡ :** ನಡುಗನ್ನಡಕ್ಕೆ ಹಿಂದಿನದು "ಹೞಗನ್ನಡ" (ಕೈಪಿಡಿ. ೧) ; ಹೞಗನ್ನಡದ ನಿಯಮದಂತೆ ರಾಮಂಗೆ ಅತಂಗೆ, ಅವಳ್ಗೆ-ಎಂದಾಗುವುದಷ್ಟೆ (ಸಂಶೋಧ. ೬೧). **ಹೞೆಗನ್ನಡ :** ತೆಲುಗಲಿಪಿ ನಾಗರದ ಲಿಪಿ ಗ್ರಂಥಲಿಪಿ ಹೞೆಗನ್ನಡದ ಲಿಪಿ ದ್ರಾವಿಳಲಿಪಿಯು . . . ಮೊದಲಾದ ಹಲವು ಲಿಪಿಗಳನೋದ ಬಲ್ಲಗ್ಗಳದ ಕರಣಿಕರಂ ಕರೆಸಿ (ಬಸವ. ೫-೫೩) ; ಈ ಹೊಸಗನ್ನಡಯುಗ ದಲ್ಲಿಯೂ ಹೞೆಗನ್ನಡದ-ಅಚ್ಚಗನ್ನಡದ ಕೆಲವು ಸಾಲುಗಳು . . . ಮಿಸುಗುತ್ತವೆ (ಕಾಲೂರ. ೬ ಹರಕೆ). [ಪೞ$_1$(<ಪೞದು) + ಕನ್ನಡ$_1$]

**ಪೞಗಬ್ಬ** (ನಾ). ಹಳೆಯ ಕಾವ್ಯ ; ಪ್ರಾಚೀನ ಕಾವ್ಯ : ಎಸೆಯದೆ ಪೊೞ್ದು ಕೆಟ್ಟ ಪೞಗಬ್ಬಮನಾವಗಮೆಮ್ಮವೆಂದು ಬಾಚಿಸಿ (ಶಾಂತಿಪು. ೧೨-೬೩) ; ಪೞಗಬ್ಬಮೆಲ್ಲಮಂ ಕಕ್ಕಿಸಿ ತಿಂದು ಕಂಬಳದ ಮಾೞ್ಕೆಯ ಮಾಡುವೆನೆಂಬ ಸಾಸಿಗಂಗಕ್ಕಟ ಪೊಣ್ಮು ನಿರ್ವಹಿಪುದೇನರಿದಾಯ್ತು ಮಹಾಪ್ರಬಂಧಮಂ (ಸೂಕ್ತಿಸು. ೧-೩೬). [ಪೞ$_1$(<ಪೞದು) + ಕಬ್ಬ$_1$]

**ಪೞಗಬ್ಬಿಗ,** ಪೞಗಬ್ಬಿಗ (ನಾ). ಹಿಂದಿನ ಕವಿ ; ಪ್ರಾಚೀನ ಕವಿ : ಪೞಗಬ್ಬಿಗರ್ನುಡಿದ ಮಾತನೆ ಪಲ್ಲಟವಿಟ್ಟು ಕಟ್ಟುವಂ ಕವಿಗಳ ವೇಷದಿಂದೆ ಕುಣಿದೇಡಿಪ ಱೋಡಗನೆಂದು ನಕ್ಕಪೆಂ (ಅನಂತ. ೧-೪೬). **ಪೞಗಬ್ಬಿಗ :** ವಿಭಕ್ತಿ ಸಮಾಸ ಶಿಥಿಲಗಳಾ ಪೞಯನೇನುಂ ಪಾಡುಗವಿತೆಗಳೊಳು ವಿಚಾರಿಸ ಸಲ್ಲವೆಂಬಗ್ಗಳದ ಪೞಗಬ್ಬಿಗರ [ಪೇೞ್ಕೆಯಂ] ತೆಱದಿ ವಿರಚಿಸದೆ (ಸಾಳ್ವಭಾ. ೧-೪೫). [ಪೞ$_1$(<ಪೞದು) + ಕಬ್ಬಿಗ]

**ಪೞಗಲಿ** (ನಾ). ಹಿರಿಯ ವೀರ ; ಅನುಭವಿಯಾದ ಯೋಧ : ಉಬ್ಬಾಳಿಯುಳಮಿಯ ಲೆಕ್ಕಕ್ಕಿಱಿದು ಬೆಸಕೆಯ್ವ ಪೞಗಲಿಗಳುಮಂ . . . ನೋಡಿ (ಗದಾಯು. ೯-೩೪ ವ). [ಪೞ$_1$(<ಪೞದು) + ಕಲಿ$_2$]

**ಪೞಗಳ್ಪು** (ನಾ). ಹಳೆಯ ಹೆಂಡ : ಪೞಗಳ್ಪಂ ಕುಡಿದುರ್ಕಿ ಸೊರ್ಕಿ ಕೆಡಪುತ್ತೋರೊರ್ವರೊಳ್ ಪೋರ್ದು ಪೊಯ್ದಱಿಯುತ್ತುಂ (ಲೀಲಾವ. ೨-೧೨೬). [ಪೞ$_1$(<ಪೞದು) + ಕಳ್ಪು(<ಕಳ್$_3$)]

**ಪೞಗೞವೆ** (ನಾ). ಹಳೆಯ ನೆಲ್ಲು,—ಬತ್ತ : ಪೞಗೞವೆಯ ಕೂೞ್ ತಿವುಡುಗಳೆದ ತೊವರಿಯ ತೊವೆ (ಕಾವ್ಯಾವ. ೨೪೧) ; ಪೊಸ ಅಡಕೆ, ಪೞಗೞವೆ (ಭಾಷಾಭೂ. ೧೪೪ ಪ್ರಯೋ). [ಪೞ$_1$(<ಪೞದು) + ಕೞವೆ]

**ಪೞಗಾಂಪ** (ನಾ). ಮುದಿ ದಡ್ಡ ; ವಯಸ್ಸಾದ ಮೂರ್ಖ : ಪೞಗಾಂಪರ ನುಡಿ ಮುತ್ತುಂ ಮೆಟಿಸುಂಗೋದಂದಂ (ಶಾಂತಿಪು. ೧೦-೧೮೧). [ಪೞ$_1$(<ಪೞದು) + ಗಾಂಪ]

**ಪೞಗುಂಟಣಿ,** ಹೞಗೂಂಟಣಿ (ನಾ). ವಯಸ್ಸಾದ ಕುಂಟಣಿ,— ತಲೆಹಿಡುಕಿ : ಚೆಲ್ಲದೊಳೆ ನುಡಿದು ಪೊಸಸವಿಯಲ್ಲಮನಿತ್ತಗಲೆ ನೂಂಕಿ ಕಳೆದಂ ಚದುರಂ ನಲ್ಲರೊಳೆ ನೆರೆಯಲೀಯದ ನಿರ್ಲಜ್ಜೆಯೆ ಲಜ್ಜೆಯೆಂಬ ಪೞಗುಂಟಣಿಯುಂ (ಲೀಲಾವ. ೧೩-೧೫). **ಹೞಗೂಂಟಣಿ :** ಹೞಗೂಂಟಣಿ ಶಿಕ್ಷಿಸಿದಳ್ ಮೃಗಾಕ್ಷಿಯಂ (ಶಾಂತೀಶ್ವ. ೧೧-೭೭).

[ಪೞ$_1$(<ಪೞದು) + ಕುಂಟಣಿ]

**ಪೞಗೂೞ್,** ಹಱಿಗೂೞ್ (ನಾ). ಹಳೆಯ ಆಹಾರ ; ತಂಗಳನ್ನ : ಈ ಪೞಗೂೞ ಪಂದೆಗಳ್ಗಿಂದಿನಿತೇತಕೆಂದಿಱುಕೆಗೆಯ್ವುದು ನೀತಮಿದಲ್ತು (ಚಕವಿ. ೫-೪೫). **ಹಱಿಗೂೞ್ :** ತಾಮಿರ್ವರುಂ ಪೋಗಿ ತಿರಿತಂದೆಂಜಲು ಹಱಿಗೂೞುಂದೆನ್ನಂ ಸಲಹೆ (ಪೂರ್ವಪು. ೨೧).

[ಪೞ$_1$(<ಪೞದು) + ಕೂೞ್$_1$]

**ಪೞಗೆಯ್** (ನಾ). ಹಳೆಯ ಹೊಲ : ಅಸಮಸದಿಂ ಪೞಗೆಯ್ಯಂ ಕಸಮಂ ಸೋದಿಸದೆ ಬಿತ್ತಿದೊಕ್ಕಲಿಗನವೋಲ್ ಸಸಿಯಂ ನೋಡಿ ತಲೋದರಿ ಬಿಸುಸುಯ್ಯುಂ ಬಯ್ಗುಮಂತೆ ಮಾಡಿದ ಬಿದಿಯಂ (ಕಾವ್ಯಾವ. ೪೫೪). [ಪೞ$_1$(<ಪೞದು) + ಕೆಯ್$_4$]

**ಪೞದು,** ಪೞದು, ಹಳತು, ಹೞದು, ಹೞದು (ನಾ). ೧. ಹಳೆಯದು ; ಹಿಂದಿನದು ; ಪೂರ್ವಕಾಲಕ್ಕೆ ಸೇರಿದುದು : "ಜೀರ್ಣಂ, ಜರತ್, ಪುರಾಣಂ . . . ಪುರಾತನಂ-ಈ ೬ ಪ(ಹ)ೞದು" (ಹಲಾಯು. ೧೧೮-೨೬) ; ಪೊಸತುಂ ಪೞದುಮನಱಿದು ಪರಿಯಿಸಲ್ ನೀನೆ ಬಲ್ಲೆ

(ಪಂಪಭಾ. ೫-೪೬ ವ); ಪೊಸತು ಪಟಿದೆಳದು ಪೊಣಗೊಳಗು ಸಮ ಮೆನಿಪ್ಪವಚಿಂಗಳಶ್ವಮಂತಕ್ಕೆ ನಿಪಾತಿಸೆ ಪಡೆಗುಮವಚಿಂಗಳೊಳಗಿಂಗ ಸಂಗದಿಂ ಸಮನಿಸಿರ್ಪುದುಮುಳ್ಳಾದೇಶಂ (ಶಾಬ್ದಾವ. ೨೩೯). **ಪಳದು:** ೧. ಪಳದೆಂದು ತೆಗೆದೊಗೆಯುಗುಂ (ಶಾಲೂರ. ೧೮೭-೪೨೫). **ಹಳತು:** ೧. ಛಂದಛಂದ ನವಬಂಧ ಪಡೆದು ಬಂದಿಹವು ಹಳತ ಮರೆಸಿ (ಅರಳು. ೨೪೪-೨೦); ಹಳತೂ ಚರ್ಚೆಗೆ ಬರಲಿ, ಹೊಸತೂ ಬರಲಿ (ಒಂಟಿದ. ೩೪); ಹಳತಿಗೆ ತೇಪೆ ಹಾಕಿ ರಿಪೇರಿ ಮಾಡುವ ಕೆಲಸದಷ್ಟು ಅವಿವೇಕ ಇನ್ನೊಂದಿಲ್ಲ (ಹಣಪ್ರ. V, ಮುನ್ನು ೧). (ಗು). ೨. ಹಳೆಯ; ಪ್ರಾಚೀನ: ಹಳತು ಗ೧॥ ಅ ಶುದ್ಧ ೧॥ ಲು ಮೃಷ್ಟಾಂನ್ನ ಸಮಾರಾಧನೆ ದಕ್ಷಿಣೆ ಸಹ ಗ|೦... ಅಂತ್ತು ಹಳತು ೩॥೦ (ಮೈಆರಿ. ೧೯೪೩, ೫೦-೨೫; 1682); ಹಳತು ಗ೩॥೦ ಅಕ್ಕಾರಥಲ್ಲೂ ಯಿದೇ ಹಳತು ಆರ್ರುವರೆ ವರಹಾವಂನ್ನು... ನಪ್ಪಿಸಿದ ದಾನಶಾಸನ (ಮೈಆರಿ. ೧೯೩೩, ೩೧-೪೦; 1737). **ಹಳದು:** ೧. ಹಳದು ವಿಾರಿ ಹೊಸದಿಲ್ಲ, ಬೀದು ವಿಾರಿ ಬಣ್ಣವಿಲ್ಲ (ಗಾದೆ). **ಹಟದು:** ೧. ಹಟದಪ್ಪ ಮಾತದ್ಯೆತಿಹ್ಯಮುಕ್ಕುಂ (ಮಂಗರಾ. ೨೬-೨).

**ಪಳೆಯಂತೆ**=ಹಿಂದಿನಂತೆ; ಮೊದಲಿನಂತೆ: ಮತ್ತೆ ಮರವಟ್ಟಾಗಿ ಕ್ರಿಮಿಗಳ ಮೊತ್ತದಲಿ ಜನಿಸುವರು ಮನುಜರ ಸತ್ವವಹ ಪಳೆಯಂತೆ ತನ್ನಯ ಭಕುತಿಯಿಲ್ಲದಡೆ ಸುತ್ತಿ ಬಹ ಚಕ್ರದಲಿ ಸಾವುತ ಮತ್ತೆ ಹುಟ್ಟುವ ದುಃಖಸಾಗರದುತ್ತರಣವನು ಕಾಣದಿಹ ನರನಾಮುಸಖನೆಂದ (ಸಿಭಾಗ. ೧೧-೧೭-೪೨); ತಣ್ಣದಿರನನ್ವಯದ ಪಾರ್ಥನ ತುರಂಗಮದು ಪೆಣ್ಣುದುರೆಯಾಗಿ ಪೆರ್ಬುಲಿಯಾಗಿ ಪಳೆ[ಪಾಠಾಂ. ಳೆ]ಯಂತೆ ಕಚ್ಚೊಳಿಸು ವನುಲಾಶ್ವಮಾಗಿಯಾಶ್ಚರ್ಯದಿಂಸ್ತ್ರೀ ರಾಜ್ಯಮಂ ಪೊಕ್ಕುದು (ಜೈಮಿಭಾ. ೧೫ ಸೂಚನೆ). **ಪಳೆಯ ಮಾಳ್ಕೆ**=ಹಿಂದಿನ ರೀತಿ; ಮೊದಲಿನ ಬಗೆ: ದೇಶದೊಳಲ್ಲಿಗಲ್ಲಿಗೆತ್ತತ್ತಲುಮಾವಗಂ ಪಳೆಯ ಮಾಳ್ಕೆ ವೊಲಾದುದು ಗಂಗರಾಜನಿಂ (ಎಕ. II, ೭೩-೩೭; 1118). **ಪಳೆಯ ರೋಗ**=ಹಳೆಯ ರೋಗ; ಬಹಳ ಕಾಲದಿಂದ ಬೇರೂರಿರುವ ವ್ಯಾಧಿ: ಪಳೆಯ ರೋಗಕೌಷಧಂಗೊಳಲ್ ನವರೋಗಮೊಲಿದು ಬಂದಂತೆ (ಜಿಬಪು. ೩೩-೭). **ಪಟದಾಗು**=ಹಳಸಿ ಹೋಗು; ರುಚಿಗೆಡು: ಕಾಂತೆಯರ್ಗನುರಾಗಂ ಪಟದಾಗೆ ಪುರುಷರೌಷಧಿಗ್ಗುಳಿಗೆಯವೊಲ್ ಮನಕ್ಕೆ ಹೇಯಮಂ ಪುಟ್ಟಸುಗುಂ (ದಶಕು. ೪-೯೫). **ಪಟಿಯ, ಪಳೆಯ, ಹಳೆಯ**=ವಯಸ್ಸಾದವನು; ಹಿರಿಯ; ವೃದ್ಧ: ಮುನ್ನಂ ಪಟಿಯರುಮನಾಪ್ತರುಮಂ ಪೊಜಗಿಕ್ಕಿ (ಪಂಚತಂ.೧೯೫-೧೯); ಪುರದೊಳಗಣ ಭವ್ಯಜನರುಂ ಪಟಿಯರುಂ ಪ್ರಧಾನರುಂ...ಶಾಗಿಸಿ (ಧರ್ಮಾಮೃ. ೮-೨೦೬); ಸಂದಾಯಿಯೆಂಬ ಪಳೆಯನ ಕೈಯೊಳಾಗಳೆ ಕೊಟ್ಟು ಶಿರಗೊಯ್ದು ಪಳಗೀವುದೆನೆ (ಭೈರವೇ. ೧-೨೬೪); ಅಂದಿಂಗೆಳೆಯ ನೀನು ಹಳೆಯ ನಾನು (ಬಸವ. ೨); ಹಳೆಯರನು ಸೇವಕರನಾಪ್ತರ ಬಳಗವನು ನಿಜಮಂತ್ರಿವರ್ಗವನುಳಿದು ತಾನನುಚಿತದಿ ದುರ್ಜನರುಗಳ ಪಾಲಿಸಿದ ಫಲವು ಕೈಯೊಡನಾಯ್ತು (ಜೀವಂಧ. ೪-೭೩); ಹಳೆಯನಹೆ ನರೆಗೂಡದಲೊಂದಿಲ್ಲ (ಸಿಭಾಗ. ೫-೭-೮). **ಪಟಿಯ ಪಾಡಿ**=ಹಳೆಯ ಸೈನ್ಯ; ಹಿಂದಿನ ಸೇನೆ: ಅಂತು ಬೆಡಂಗುವೆತ್ತು ನಡೆವ ಪುಸಿವಡೆಯ ಪಜಗೆ ಪಟಿಯ ಪಾಡಿಯಂ ಕೂಡಿಕೊಂಡು... ನಡೆದಂ ಕಾವಂ (ಕಬ್ಬಿಕಾ. ೨೦೮). **ಪಟಿಯ ಬೇವಿನೆಣ್ಣೆ**=ಹಳೆಯದಾದ ಬೇವಿನೆಣ್ಣೆ: ಕನಲ್ವ ಕೆಂಡದ ಮೇಲೆ ಪಟಿಯ ಬೇವಿನೆಣ್ಣೆಯೊಳ್ ಕೊಯ್ದಿಕ್ಕಿದ ಬೆಳ್ಳುಳ್ಳಿಯ ಕಂಪಿನಂತೆ... ಬೇವ ಪೆಣಂಗಳ ಕ[೦]ವು ನಾಱುವುದರ್ಕೆ ಸೈರಿಸಲಾಱದೆ (ಪಂಪಭಾ. ೧೩-೭೧ ವ). **ಪಟಿಯ ಸೀರೆ, ಹಳೆಯ ಸೀರೆ, ಹಳೇಸೀರೆ, ಹಟಿಯ ಸೀರೆ**=ಹಳೆಯದಾದ ಬಟ್ಟೆ; ಹಳತಾದ ವಸ್ತ್ರ: ಪಟಿಯ ಸೀರೆಯಂತೆ ಗುಣದೊಳ್ ನೂನಮಾಗದೆ (ಧರ್ಮಾಮೃ. ೫-೯೯); ಅವಳು ಬಣ್ಣ ಮಾಸಿದ ಹಳೆಯ ಸೀರೆಯನ್ನು ಉಟ್ಟಿದ್ದಳು (ರೂಢಿ); ನನ್ನ ಹಳೇ ಸೀರೆ ಹರಿದು ಹೋಯಿತು (ರೂಢಿ); "ಪಟಚ್ಚರಮೆಂಬುದು ಹಟಿಯ ಸೀರೆ" (ಹಲಾಯು. ೯೦-೩೯೬); "ಪಟಚ್ಚರ, ಜೀರ್ಣವಸ್ತ್ರ—ಹಟಿಯ ಸೀರೆ" (ನಾಚಿರಾ. ೬). **ಹಳೆಪೈಕ, ಹಳೆಯ ಪಯಿಕ, ಹಳೆಯ ಪೈಕ, ಹಳೇಪೈಕ**=೧. ಹೆಂಡ ಇಳಿಸುವುದೇ ಕುಲವೃತ್ತಿಯಾಗುಳ್ಳ ಒಂದು ಜಾತಿ ಹಾಗೂ ಅದಕ್ಕೆ ಸೇರಿದ ವ್ಯಕ್ತಿ; ಈಡಿಗ: ಹಳೆಪೈಕದವರ ಗ್ರಾಮಾಂತ್ರಗಳಿಂದಾ ವರುಷ ೧ಕ್ಕೆ ವರ್ತನೆ (ಎಕ. XII, ಮದ್ದಗಿ. ೩೧-೩; 1656); ಹಳೆಪೈಕರು-ಇವರು ಕಾನಡಾಜಿಲ್ಲೆಯಲ್ಲಿಯೂ ಧಾರವಾಡಜಿಲ್ಲೆಯ ದಕ್ಷಿಣಭಾಗದಲ್ಲಿಯೂ ಮಾತ್ರ ಇರುತ್ತಾರೆ (ಕಭಾಗ. ೧೭೭); ಯಳವರ್ಷ ಹಳೇಪೈಕದ ಗಿರಿಯನೆಂಬ ದಂಡಿಗೇ ದಾಸನ ಮೈಮೇಲೆ ದೇವತೆಯು ಬಂದು... ಪುಕಾರಿಸಿದಳಂತೆ (ಚಿತ್ರಪಾ. ೭); ನಮಗೋಸ್ಕರ ನಮ್ಮ ಹಳೇಪೈಕದವರು ಕೆಲಸ ಮಾಡುವುದಿಲ್ಲವೆ? (ಸುಮತಿ. ೭೮). ೨. ಒಂದು ವಿಶಿಷ್ಟ ಪರಿಚಾರಕವರ್ಗ: ತಂತಮ್ಮ ಸೆಜ್ಜೆಗಳಲ್ಲಿ ಪಲತೆರಗಳಿಂದ ಸ್ಥಿರರಾಗಿರುವ ಮಹಾರಾಜವಂಶದವರು, ಸಾಮನ್ತರು... ಹಳೆಯ ಪಯಿಕದವರು ದಣ್ಣನಾಯಕರು (ಬಿಟ್ಟಅ. ೩೦-೪); ತಳುವದೆ ಬಿಟ್ಟಿದ ಚಾಮೇಂದ್ರ ಸಾಕಿದ ಹಳೆಯ ಪೈಕದ ನಾಯಕರು ಒಳಹೊಕ್ಕು ವೈರಿ ಮಾರ್ಬಲವನು ಸದೆದಾಗ ಕಳಕಳವನು ಮಾಡಿದರು (ಕಂಠವಿ. ೩-೭೯); ಎಳದು ಮೃಗವನು ಕೊಲ್ವ ಹಳೆಯ ಪೈಕದ ಮಂದಿ ಒದಗೆ (ಕುಮಾಸಾಂ. ೧೪೪). [ದೇ॰॥ ತಮಿ. ಮಲ. ಪಟ; ತುಳು. ಪರ; ಕೊಡ. ಪಳೆ]

**ಪಟನವಿರ್, ಪಟಿನವಿರ್** (ನಾ). ೧. ಹಳೆಯ ಕೂದಲು: ಪಂದಿಗಳುಂ ಪಟನವಿರಿಕ್ಕಿದುವು (ಪಂಪಭಾ. ೫-೩೮); ಮೂಷೆಯಿಟ್ಟಜಗಿದ ಮಾಟಿಕ್ಕೆಯಿಂ ಪಟನವಿರ್ ಮೊದಲಿಂದೆ ಕಟಲ್ದು ಬೆಳ್ನವಿರ್ ತುಱುಗಿ (ಸೂಕ್ತಿಸು. ೩-೩೭). **ಪಟಿನವಿರ್:** ೨. ನರೆತ ಕೂದಲು: ಪಟಿನವಿರೆಲ್ಲಂ ಮೆಯ್ಯಂ ತಳೆದುಂ ಬೆಳ್ಳಿಗಗಳಾಗಿ ತೀವಿದರ್ದುವು (ಸೂಕ್ತಿಸು. ೩-೯೩). [ಪಟ₁ (<ಪಟದು) + ನವಿರ್]

**ಪಟನೀರ್, ಹಳೆನೀರು** (ನಾ). ಬಹಳ ದಿನಗಳಿಂದ ಶೇಖರಿಸಿಟ್ಟ ನೀರು; ಹಳೆಯ ನೀರು: ಸಾರಮೆನಿಪ್ಪುತ್ತರಣೆಯ ಬೇರಂ ಸೈಂಧವಸಮನ್ವಿತಂ ಪಟನೀರಿಂದೋರಂತಿರೆ ಕಿಸುವೊನ್ನೊಳ್ ಜಜಿಸಿ ಕೊಂಡೆಚ್ಚೆ ನೇತ್ರರೋಗಂ ಕಿಡುಗುಂ (ಲೋಕೋಪ. ೯-೬೮); ಪೀರ್ದ ಪಟನೀರ್ಗಳನಟ್ಟಿಸಲಾಜದೆಯ್ದೆ ಕಂಟಲಿಸಿ ಮುಗುಟ್ಟಿದಪ್ಪುದು (ಲೀಲಾವ. ೧೨-೩೮); ಪಟ[ಪಾಠಾಂ. ಎಳೆ]ನೀರಿಂದಂ ಮರ್ದಿಸಿ ಪಳೆಯದೊಳಂ ಪೂಸೆ ಕಿಱುಯ ಕುಟಜದ ಬಿತ್ತಂ ಕೊಟೆವಾವಿನ ಕೂರ್ಯನ ವಿಷಮುಟಿಗುಂ (ಖಮದ. ೧೦-೬೮). **ಹಳೆನೀರು:** ದಾಹಕ್ಕೆ ಹಳೆನೀರಂ ಬೆಚ್ಚಗೆ ಮಾಡಿ ಕುಡಿಯ ಕೊಡುವುದು (ಸಕವೈ. ೭೭). [ಪಟ₁(<ಪಟದು)+ನೀರ್]

**ಪಟನುಡಿ, ಪಳನುಡಿ, ಪಳೆನುಡಿ** (ನಾ). ಪ್ರಾಚೀನವಾದ ಮಾತು; ವೇದ: ಪಟನುಡಿಯಂ ಪರ್ಚಿದ ಮುನಿಗಳ ಪೊಗಟ್ತೆನಮಂದು ಕುವರನಾದ ವೊಲಾದಂ ನಿಳಯಂಗೆ ನಿಖಿಲಗುಣದೊಳ್ಗೆಲೆಯಂಗಳಸಿಂಗರಾರ್ಯವರ್ಯಂ ಗೀಗಳ್ (ಚಿಕವಿ. ೪-೧೯); ಪಟನುಡಿಯಂ ಬಟಿಸಂದು ಪಲವುಂ ಪಗಲ್ ತಿರೆಯಂ ಪೊರೆಯುತೆ (ರಾಮಾಶ್ವ. ೭-೧೧). **ಪಳನುಡಿ:** ಕಾವ ಪಳನುಡಿಯೊಡೆಯನ ವಾಹನನು ನೀನು (ವಿಜಗೀ. ೨೧-೬). **ಪಳೆನುಡಿ:** ರಂಗ ನಿನ್ನಯ ಸಂಕುಗೊರಲ ಗೋಚರದಿಂದ ಹಿಂಗುಗು ಗಡ ಭವಪಾಶ ಹಿಂಗೆಂಬ ಪಳೆನುಡಿಯರ್ಥವೆನ್ನೆರ್ದೆಯೊಳು ಮುಂಗುಡಿಗಟ್ಟಿರುತಿರ್ಕೆ (ಶತಸಾಂ. ೩-೧೪). [ಪಟ₁(<ಪಟದು)+ನುಡಿ₂]

**ಪಟಪಟ, ಪಳಪಳ, ಪಟ್ಪಟ** (ನಾ). ಒಂದು ಅನುಕರಣ ಶಬ್ದ: ಪಟಪಟಯೆಂದಾಲಿಕಲ್ಗಳುದಿರ್ದುವು ನಭದಿಂ (ಶಮದ. ೫೪ ಪ್ರಯೋ).

**ಪಳಪಳ :** ಮಣ್ಣೆತ್ತಿ ಹಾಕುವಾಗ ಏನೋ ಪಳಪಳ ಹೊಳೆಯುವುದನ್ನು ಕಂಡಳು (ತ್ಯಾಗಮ. ೧೦೬). **ಪೞ್ಪೞ :** 'ಪೞ್ಪೞನೆ' ಪರಾ.

**ಪೞಪೞನೆ,** ಪಳಪಳನೆ, ಪೞ್ಪೞನೆ (ಅ). ಒಂದು ಅನುಕರಣಾವ್ಯಯ : ಕನಕಪ್ರಾಸಾದಪಂಕ್ತಿಗಳ್ ಪೞಪೞನೆ ಬೆಳಗುವ ಕೊಡಗರ್ಗಳ ನಾದಿತ್ಯನ ನಂಟರೆಂದು ತಮೋರಾಜಕಂ ಮುಳಿದು ಸೆಱೆಗೆಯ್ದು ಬೆಳಗಿನ ಸೆಱೆಯ ಮನೆಗಳನ್ನವಾದುವು (ಪಂಪಭಾ. ೪-೪೯ ವ) ; ಕೆಯ್ದಾವಿಗೆಗಳ್ ಪೞಪೞನೆಸೆದಿರೆ (ಶಾಂತಿಪು. ೮-೬೪). **ಪಳಪಳನೆ :** ಮರುಳ್ಗಳಾಟಮಂ ಪಳಪಳನೆಮೆಯುಳ್ಕದೆ ನೋಡಿ ಮುಗುಳ್ನಗೆ ನಗುವ ವೀರಭಟರ ಪಂದಲೆಗಳುಂ (ಪಂಪಭಾ. ೧೦-೧೧೬ ವ) ; ಪಳಪಳನೆ ಸುರಿಯುತಿರೆ ಮೂತುಗಳ ಮುತ್ತುಮಳೆ ಕಡುಬಡವನಂತಾದನರ್ಜುನಂ (ಚಿತ್ರಾಂಗ. ೩೫-೯೫೬). **ಪೞ್ಪೞನೆ :** "ಪೞಪೞನೆ, ಪೞ್ಪೞನೆ-ವಿರಲಾರ್ಥಂ" (ಶಮದ. ಪಂ. ೧).

[ಪೞಪೞ+-ಅನೆ$_1$]

**ಪೞಪು** (ನಾ). ನರೆತ ಕೂದಲಿಗೆ ಹಚ್ಚುವ ಕಪ್ಪುಬಣ್ಣ ; ಕಲಪು: "ಪೞಪು (ಪೞವು) – ನರೆಗಿಕ್ಕುವ ಕರ್ಪು" (ಶಮದ. ಪಂ. ೧) ; ಪೞವು, ಪೊೞವು (ಶಬ್ದಾನು. ೧೪೦ ವ್ಯಾಖ್ಯಾ). [ ? ]

**ಪೞಮಱೆವು** (ನಾ). ಹಳೆಯದಾಗಿ ಮರೆತುಹೋದುದು : ಪಟ್ಟಸೂತ್ರದೆರಡೆಱೆಯುಮಂ ಗಂಟಿಕ್ಕುವಂತೆ ಪರಂಪರಮುಂ ಪೞಮಱೆವುಮಾದ ನಣ್ಪಂ ಪುನರ್ನವಂ ಮಾಟ್ಪ ಬಗೆಯಿಂ ಎನ್ನನಿಂತೆಂದಟ್ಟಿದ ನೆಮ್ಮರಸಂ (ಶಾಂತಿಪು. ೫-೩೭ ವ).

[ಪೞ$_1$(<ಪೞದು) + ಮಱೆವು (<ಮಱವು)]

**ಪೞಮೆ,** ಪಳಮೆ, ಹಳಮೆ$_1$ (ನಾ). ಹಳೆತನ ; ಪ್ರಾಚೀನತೆ ; ಪುರಾತನತೆ : ನೀಂ ಪೞಮೆಯುನೆ ತೋಱೆ ಕೇಱೆ ಕೆಡೆನುಡಿದಪೆ (ಪಂಚತಂ. ೧೦೬-೮) ; ಪೞಮೆಯ ದೇವರ ಮೇಲೆಂತಯ್ . . . ಮೆಱೆದಪ್ಪಯ್ ! (ಬದ್ಧಪ್ರ. ೨೨-೪೬೫). 'ಪೞವೆ' ಪರಾ. **ಪಳಮೆ :** ಪಳಮೆಯಾಳದ ಕಣ್ಣನೆನ್ನ ಕಣ್ಣಲಿ ನೆಟ್ಟು (ಹೊಂಗಳು. ೧೬-೧೬). **ಹಳಮೆ$_1$ :** ಬಳಸಿನಲಿ ಬಂದಿಹರ ಕಾಣುತಿಹೆನು . . . ಹಳಮೆಯ ಮಹಾತ್ಮರನು ಪರಮುಕವಿಗಳನು (ಇಂಗೀತ. ೯೩-೪) ; ಭಾರತದೇಶದ ಇತಿಹಾಸಕ್ಕೆ ಇರುವಷ್ಟು ಹಳಮೆ, ಹಿರಿಮೆ ಪ್ರಪಂಚದ ಬೇರೆ ಯಾವ ದೇಶಕ್ಕೂ ಇಲ್ಲ (ಭಾರದ. ೪೧೬) ; ೬ನೆಯ ಶತಕದ ಬಾದಾಮಿಶಾಸನವು ತ್ರಿಪದಿಯ ಹಳಮೆಯನ್ನು ತಿಳಿಸುವುದಲ್ಲದೆ . . . ಒಬ್ಬ ಕಲಿಯ ಶಬ್ದಚಿತ್ರವನ್ನು ಕೊಡುತ್ತದೆ (ತವಿಶಿ. ೧). [ಪೞ$_1$(<ಪೞದು)+-ಮೆ$_3$]

**ಪೞಯಿಂಗ** (ನಾ). ( ? ) : ×× ನಮಸ್ಯ ನೆತ್ತರೊಗೊಡೆ[ಬಾ]ಟಿ ಮಱುವಕ್ಕ ××× ವ ಪೞಯಿಙ್ಗಗೆ[ಗೊ]ಡ್ಡೊಡೆ ಬಾಱೆನ್ನಿದೀ ವೃತ[ಂ]ಗಳಂ ಪಲಿಸುತ್ತು (ಸೌಇಇ. XI-i, ೧೦-೧೦ ; 864). [ ? ]

**ಪೞಯಿಂಗೆ,** ಪಳಯಿಂಗೆ, ಪಳವಿಗೆ, ಪೞವಿಗೆ, ಹಳಯಿಂಗೆ, ಹಳವಿಗೆ, ಹೞಯಿಂಗೆ, ಹೞವಿಗೆ (ನಾ). ಧ್ವಜ ; ಪತಾಕೆ ; ಬಾವುಟ : "ಪೞಯಿಂಗೆಯೆಂದು ಕೇತನದೊಳಂ" (ಕರ್ನಾಶ. ೬೯) ; ಪೞಯಿಂಗೆ ಬಿಟ್ಟೊಡೆ ಬೀರದ ಪೞವಿಗೆಯ ನಿಜಾಸಲೆಂದೆ ಹರಿವಕ್ಷಮನಲ್ಲಱುವೋಗೆ ಯೆಚ್ಚು (ಪಂಪಭಾ. ೧೨-೨೦೯) ; ದಿನಕರನ ಹಯಂ ಗಗನಾಧ್ವಖೇದಮಂ ಪೞಯಿಂಗೆಗಳ ತಣ್ಣೆಲರ ತೀಟದಿಂ ತೊಲಗಿಸುಗುಂ (ಪಂರಾಮಾ. ೧-೧೧೬). **ಪಳಯಿಂಗೆ :** ಸಾರದಿರಿತ್ತಲು ಮುಳಿದಪೆ ಮಾರಿಗಳೀ ಪಾರ್ವರೆಂದು ಕಲಿಯಂ ದೇವಾಗಾರದ ಪಳಯಿಂಗೆ ದೂರದೆ ಬಾಗಿಸುವನ್ತಿರ್ಕೆಮಲ್ಲಿ ವಾತೋದ್ಧೂತಂ (ಸೌಇಇ. IX-i, ೧೫೮-೪೬ ; 1092) ; ಮಿಳಿರ್ಪ ಪಳಯಿಂಗೆ . . . ಚಾಮರನಿಚಯದಿಂದೆ ಸಿಂಗರಿಸಿರ್ದ ಥಳಥಳಿಪ ಮಣಿರಥಾವಳಿಗಳು ಪಳಂಚಿದವು (ಸಾಳ್ವಭಾ. ೨೫-೧೬) ; ಕರಮಿದೆ ನನ್ನಿಯೆಸುತ್ತುಂ ಬಿರಿದಿನ ಪಳಯಿಂಗೆಯನೆತ್ತಿಸುತ್ತೆ ಸೆದಿರ್ದಂ (ನೃಪಮಿ. ೩೬-೮). **ಪಳವಿಗೆ :** "ಪಳವಿಗೆ ಕೇತನಕೆ ನಾಮಂ" (ಭಾರತಿ. ೪೧) ; ಬಗಿದು ಪಾತಾಳಮಂ ಮುಟ್ಟುವಗಳುದ್ದದಿಂ ನೆಗಳ್ದಂಬರದೊಳೆಸೆವ ಪ[ಪಾಠಾಂ.ಹ]ಳವಿಗೆಗಳೊಪ್ಪದಿಂ (ಏಕಾಂರ. ಹ. ೨೮೧-೨) ; ಪಲಪಲ ತೆಱದ ಪಳವಿಗೆಯು . . . ರಥದೊಳಗೆ ನಿಂದನು ಶಕ್ರಸಾರಥಿ ನುಡಿಸಿದನು ನರನ (ಕುಮ್ಯಾಅ. ಒರಿಇ. ೮-೧೪) ; ಪಳವಿಗೆಯ ಹನುಮನಂ ಪಲ್ಗಿರಿಸಿ ಹರಿಯನೆಚ್ಚು . . . ಸಾತ್ಯಕಿ ಬಭ್ರುವಾಹನಾದಿಗಳನುಱೆ ನೋಯಿಸಿದನು (ಜೈಮಿಭಾ. ೨೫-೩೯). **ಪೞವಿಗೆ :** "ಪೞವಿಗೆ (ಪೞಯಿಂಗೆ) ಕೇತನಂ" (ಶಮದ. ಪಂ. ೧) ; ಅನೇಕ ಪ್ರಾಸಾದದ ಮೇಲೆ ಚಿತ್ರದ ಪೞವಿಗೆಗಳಂ ತುಱುಗಲುಂ ಬಂಬಲ್ಗಳುಮಾಗೆ ಕಟ್ಟಿಸಿ (ಪಂಪಭಾ. ೩-೪೦ ವ) ; ಪೊಂಬಾಱೆಯ ಪೞವಿಗೆಗಳೊಳಂ . . . ಸೊಂಪುವಡೆದ ಕಂಪಿನ ಪೊಟಲೆಂಬ ಬೀಡು ಬಗೆಗೊಳಿಸುತಿರ್ಪುದು (ಕಬ್ಬಿಗಕಾ. ೧೧೮) ; ಪಟ್ಟವಣಿಯುಂ ಪೞವಿಗೆಯುಂ . . . ಮೇಲ್ಕಟ್ಟುಂ ಒಳ್ಗೆಯೆನು ಮೂಱೆಗಡವನುಮಾಗಿಯುಂ ತಣಿಯದೆ (ಚಿಕಪಂ. ೮೫-೨೧). **ಹಳಯಿಂಗೆ :** ರಾಜಮುದ್ರೆ, ನಾಡ ಹಳಯಿಗೆ ಮತ್ತು ನಾಡ ಶಾಸನ ಇವುಗಳ ಗೌರವವನ್ನು ಕಾಪಾಡುವುದರಲ್ಲಿ . . . ಪ್ರಾಣವನ್ನೇ ಪಣವಾಗಿರಿಸುವನು (ಕಪವು. ೬-೮೮) ; ಚೋಳರ ಹಳಯಿಂಗೆಯನ್ನು ಇಳಿಸಿ ಹೊಯ್ಸಳ ಹಳಯಿಂಗೆಯನ್ನು ಏರಿಸಿದ ಸಂಭ್ರಮ ಸಡಗರಗಳ ಪ್ರದರ್ಶನವಾಯಿತು (ಸವತಿ. ೩). **ಹಳವಿಗೆ :** ಹೊಳೆವ ಸಿಂಧ ಪತಾಕೆ ಹಳವಿಗೆ (ಕೌರಾ. ೧೩-೪೧) ; ನವಹೇಮದಂಡದ ಹಳವಿಗೆಯ ತುದಿವಲಗೆಯಲಿ ಹಾಯ್ಕಿದರು ಪನ್ನಗನ (ಕುಮ್ಯಾದ್ರೋ. ೧೦-೪೧) ; ಬಾಲದಲಾ ವರೂಥದ ಹಳವಿಗೆಯ ಕಂಭದಲಿ ಬಿಗಿದು (ತೊರರಾ. ೬-೨೨-೧೩) ; ದಳದ ಸಿಂಗಾರದಲಿ ಬಿರುದಿನ ಹಳವಿಗೆಯನೆತ್ತಿಸಲಿ (ತಿಮ್ಮಅ. ೬-೧೨). **ಹೞಯಿಂಗೆ:** ಉಚ್ಛ್ರೂಡಾ, ಅವಚೂಡಾ-ಈ ೨ (ಪರಿವಿಧಿಯಿಂ) ಹೞಯಿಂಗೆಯ ಮೇ(ಎ)ಲೆ ಮೊಗದ ಕೆಱಗೆ ಕಟ್ಟಿದ ಕುಂಚಂ (ಹಲಾಯು. ೬೫-೩೦೪). **ಹೞವಿಗೆ :** ಗರುಡನಂತೆ ಹಾವಿನ ಹೞವಿಗೆಯುನಾರಯ್ದು ನೋಡಿಯುಂ (ಗದಾಯು. ೬-೨೮ ವ) ; ಹೞವಿಗೆ ನಮ್ಮದೀ ರಥಮಿದಪ್ಪೊಡೆ ನಮ್ಮದು (ಕುಸುಮಾ. ೧೨-೫೧). [<ಪ್ರಾ. ಪಡಾಇಯಾ./ಸಂ. ಪತಾಕಿಕಾ]

**ಪೞವ** 'ಪಟಹ' ನೋ.

**ಪೞವಂಡು** (ನಾ). ಶೇಖರವಾದ ಮಕರಂದ ; ಸಂಗ್ರಹಗೊಂಡ ಮಧು : ಕುಮುದಕೇಸರದ ರಜದೊಳರ್ದ ಚರಣಚಯಮಂ ಕೀಲಿಸಿಬಿದೆ ಪೞವಂಡಿನೊಳ್ಪಿಂಡುನೆಗೆದು ಪೊರಳ್ದು ನರಳ್ದು ಮೊರೆವ ಮಱೆದುಂಬಿಗಳ ಗಱೆಯುಂ ಗಿಱ್ಱನೆ ತೆಗೆದು ನೆಗಪಿಯುಂ (ಲೀಲಾವ. ೩-೨೦ ವ).

[ಪೞ$_1$(<ಪೞದು)+ಬಂಡು$_2$]

**ಪೞವಗೆ,** ಹಳೆಹಗೆ (ನಾ). ಹಿಂದಿನಿಂದಲೂ ಶತ್ರುವಾಗಿರುವವನು; ಬಹಳಕಾಲದ ವೈರಿ : ಪೞವಗೆಗಳಾರುಮಂ ಗೆಲ್ದಳವಿಂ ಕೈಯಿಕ್ಕಿ ನಿಂದ ಕಲಿಯೆಂದುಂ ತನ್ನೊಳಗುಂ ಪೊಱಗುಂ ತೋಱದ ಬಟ್ಟಿಯಂಗೆಱಗಿರ್ದ ಬಾಟ್ಟುದೀ ಮೂಲೋಕಂ (ಕಬ್ಬಿಗಕಾ. ೨೩೦). **ಹಳೆಹಗೆ :** ಕೆಳೆಯನೇ ಹಳೆಹಗೆಯೆಯೆಂಬವೋಲ್ ಮಳೆಕಡೆಗೆ ಮಲೆನಾಡುಗಳ ನೋಡಿ ಹಿನ್ನಡೆಯುತಿರಲು (ಕಾಲೂರ. ೫೬-೯೨). [ಪೞ$_1$(<ಪೞದು)+ಪಗೆ$_2$]

**ಪೞವಟ್ಟೆ** (ನಾ). ಹಳೆಯದಾಗಿ ಸವೆದ ದಾರಿ : ಬಟ್ಟೆಗಳ್ಕೆದೆ ನುರ್ಗಿ ಪೞವಟ್ಟೆವೊಲಾಗೆ (ದಶಕು. ೬-೬೬).

[ಪೞ$_1$(<ಪೞದು) + ಬಟ್ಟೆ$_1$]

**ಪೞವರ,** ಹಳೆಮರ, ಹಳೆವರ (ನಾ). ೧. ಬಹುಕಾಲದಿಂದಿರುವ ಮರ. ೨. ಹಳೆಯದಾದ ಮರದ ಕೋಳ : ನಿನ್ನಾಜ್ಞೆಗೋಸಗಂ ಕೋಳಂ ನೆಲಸಿತ್ತೆನ್ನ ಕರದೊಳಲ್ಲದೆ ಕೇಳಾನಿನ್ನೊರ್ವರ ಬಗೆವೆನೆ ನೋಡೆನ್ನಳವನೆನುತ್ತೆ ನುರ್ಗಿದಂ ಪೞವರನಂ (ದಶಕು. ೯-೩೧).

**ಹಳೆಮರ**: ೧. ನಮ್ಮ ಮನೆಯ ಎದುರಿನಲ್ಲೊಂದು ನೂರುವರ್ಷಗಳಷ್ಟು ಹಿಂದಿನ ಹಳೆಮರವಿದೆ (ರೂಢಿ). **ಹಳೆಮರ**: ೩. ಒಣಗಿದ ಮರ; ಒಣಮರ: ಒಟ್ಟದರು ತಾಳೇಳಜುದ್ದದಲಿಟ್ಟಣಿಸಿ ಹಳೆಮರವನುರಿಗಳಲಿಟ್ಟು ಬೊಬ್ಬಿಱಿದಬ್ಬರಿಸಿದರು ನಾಲ್ಕುಮೈಗಳಲಿ (ತೊರಂ. ೫-೬-೯). [ಪೞ$_1$(<ಪೞದು)+ಮರ$_1$]

**ಪೞವಲ್** (ನಾ). ಹಳೆಯದಾದ ಹಲ್ಲು; ಸವೆದ ಹಲ್ಲು: ನರೆದಲೆ ಬೇರ್ಬಲ್ದ ಪೞವಲ್ ಕಲೆಗಳ್ ತುಱುಗಿರ್ದ ಮೆಯ್ (ದಶಕು. ೮-೧೨). [ಪೞ$_1$(<ಪೞದು)+ಪಲ್]

**ಪೞವಱಿಗೋಲ್** (ನಾ). ಹಳೆಯ ಹರಿಗೋಲು; ಜೀರ್ಣವಾದ ದೋಣಿ: ಇಱಿದೇಱುವೊಟಿಂ ಗಂಡರೊಳಿಳಿಪೆಂಬುದು ತನಗೆ ಮುತ್ತಮುದುಗೂಂಟಣಿ ತಾಂ ಕಱಿವಣ್ ಮುತ್ತದ ಪಱ್ತಲೆ ಪೞವಱಿಗೋಲ್ ಪಱಿದ ಛೇರಿ ನೀರ್ ತೆಗೆದ ಕೊಳಂ (ಸೂಕ್ತಿಸು. ೮-೩೮೨). [ಪೞ$_1$(<ಪೞದು)+ಪಱಿಗೋಲ್]

**ಪೞವಾಡ** (ನಾ). ಕುಗ್ರಾಮ; ಬೇಚಿರಾಕುಗ್ರಾಮ: ಪೞವಾಡಯ್ದನೆ ಬೇಡೆಯುಂ ಕುಡದ ನಾನೇನೆಂದು ಸಂಧಾನಮಂ ಗಱಿಯಿಪ್ಪೆಂ (ಪಂಪಭಾ. ೧೩-೨೪). [ಪೞ$_1$(<ಪೞದು)+ಬಾಡ$_1$]

**ಪೞವಾತು**, ಪಳಮಾತು, ಪಳವಾತು, ಪಳೆವಾತು, ಹಳವಾತು, ಹಳೆಮಾತು (ನಾ). ೧. ಪ್ರಾಚೀನವಾದ ನುಡಿ; ವೇದ: "ಓದು, ಪೞವಾತು, ಬೇದಂ, ಸುತಿ—ಈ ೪ ವೇದಂ" (ಕಶಸಾ. ೫೭-೨೪೨); ಜಗದೊಳ್ ಶ್ರೀಚಳದೇವನಿಂ ಪಿರಿಯರಿಲ್ಲೆತ್ತಾನುಮುಂಟಾದೊಡಂ ಬಗೆಗೊಳ್ಗಂ ಪೞವಾತಿನೊಳ್ . . . ಮೆಯ್ದೋಱದಿನ್ನೆಲ್ಲಿಯುಂ (ಗೀತಗೋ. ೨-೫); ಒಂದೆಡೆಯೊಳ್ ಪೞವಾತಂ ನುಡಿಯುತೆ ಜನ್ನದಾರಮಂ ಪೊಸೆಯುತಿರ್ಪರ್ (ಅದ್ಭುತ. ೧-೧೦). ೨. ಪರಂಪರೆಯಿಂದ ಬಂದ ನುಡಿ; ಐತಿಹ್ಯ: "ಪೞವಾತು-ಐತಿಹ್ಯಮೆಂಬುದು" (ಹಲಾಯು. ೨೪-೧೪೬). **ಪಳಮಾತು**: ೨. ಅಂಗಗುಣ ಲಿಂಗಕ್ಕಾಯಿತ್ತು ಲಿಂಗಗುಣ ಅಂಗಕ್ಕಾಯಿತ್ತು ಇವೆಲ್ಲ ಭಾವಸಂಕಲ್ಪವಿಕಲ್ಪವು ಅಂಗಲಿಂಗಮೆಂಬುದು ಪಳಮಾತು (ಸಿದ್ಧಪ. ಕ. ೪೧೬-೧೩೪೪). **ಪಳವಾತು**: ೧. ಹೋಳ್ದೊಡಲ ನಱುವಾಯನ್ನೆಯ ಸೀಗರ್ಡಿಗನಂ ಸೀಳ್ದ ಪಳವಾತಿಗೊಳಗಾಗದಾರಿಗೆ ತನ್ನ ಬಾಳ್ದಳೆಯುಗುಡದ ಮೂವಟ್ಟಿಯ್ಯಮೊಗದ ಶಿವ ಸುವರ್ಣ್ನದಿಂ ಸಲಹುಗೆ (ನಂದಿಮಾ. ೨೧-೫೪); ರವಿ ಚಂದ್ರರ್ ಗಾಲಿಗಳ್ ಸಾರಥಿ ಬಿದಿ ಪಳ[ಪಾಠಾಂ. ಳೆ]ವಾತಶ್ವಂ (ಶಬಶಂ. ೨-೧೨); ಪಳವಾತನನುಸರಿಸದಿಹ ವಿದ್ಯೆಯಂದದಿಂ ತೊಳಪ ಸಂಸ್ಕಾರವಿರಹಿತವಾಣಿಯಂದದಿಂ (ವೆಂಕಾಂರಾ. ೫-೮-೨). **ಪಳೆವಾತು**: ೧. "ಪಳೆವಾತೆನಿಕ್ಕು ವೇದಂ" (ಕಶರ. ೬೩); ಪಳೆವಾತುಗಳೆ ಸೋಣಗಗಳಾಗಲೆಸೆದನ ಮೃತ್ಯುಂಜಯನಾಯೆಸ್ನಿರೊ (ಭಕ್ತಿಸ. I, ೨-೨); ಪಳೆವಾತಿನಧಿಕತೆಯ . . . ಆರಾದೊಡಂ ವಿಚಾರಿ ಬಳಸುವರೆ (ವೆಂಕಾಂರಾ. ೨-೮-೬). **ಹಳವಾತು**: ೧. ಹಳವಾತೆ ಹುಸಿ ತೊಳೆದು ಬೊಳೆಹೊಳೆದು ಹುತ್ತಿನ ಹೊಳೆ ಹರಿದು ಬಂದಂತೆ ಹೊಸದಾಗಿವೆ (ಮುಕ್ತಕಂ. ೯-೪೩). **ಹಳೆಮಾತು**: ೩. ಮರೆಯುವಷ್ಟು ಹಳೆಯದಾದ ವಿಷಯ: ಅದು ನಮಗೆ ದಕ್ಕಿ ಹಳೆಮಾತು ಆಗಿಹೋಯಿತು (ರೂಢಿ). [ಪೞ$_1$(<ಪೞದು)+ಮಾತು$_1$]

**ಪೞವಾನಿಸ** (ನಾ). ಹಿರಿಯ ಮನುಷ್ಯ; ವಯಸ್ಸಾದ ವ್ಯಕ್ತಿ: ಕಳೆಯುಲ್ಕಾಗದು ನರಪತಿಕುಳವನಱಿವ ಪೞವಾನಿಸನಂ (ಶಮದ. ೬೬ ಪ್ರಯೋ); ಎಳದು + ಪೆಱ, ಎಳವೆಱ, ಏವಂ ಬೆಳೆವೊಲಂ . . . ಪೞವಾನಿಸಂ (ಶಬ್ದಾನು. ೯೧ ಪ್ರಯೋ). [ಪೞ$_1$(<ಪೞದು)+ಮಾನಿಸ$_1$(<ಮಾನುಸ)]

**ಪೞವಾವಿ** (ನಾ). ಹಳೆಯ ಬಾವಿ: ಮರ್ದುಗಳೆಲ್ಲಮನೊಂದು ಪೞವಾವಿಯೊಳ್ ಪೊಯ್ದು (ವಡ್ಡಾರಾ. ೬೦-೮); ಪೞವಾವಿಯ ನೀರಂತೆ ಕಱೊಳಗಡಂಗಲುಂ (ಧರ್ಮಾಮೃ. ೬-೩೮); ಓಡಿ ಬಿರ್ದ ಪೞವಾವಿಯ ಮಧ್ಯದ ಕಾಸಮೂಲಮಂ ತೊಟ್ಟನೆ ಪತ್ತಿ (ಧರ್ಮಪ. ೧-೬೯). [ಪೞ$_1$(<ಪೞದು)+ಬಾವಿ]

**ಪೞವಾವಿಗೆ** (ನಾ). = ಪೞವಾವಿ: ನಿಡುಮರದ ತುದಿಗೋಡುಗಳೊಳ್ ಕಟ್ಟಿದ ತೃಣಪುಲೀಚಿಹ್ನಂಗಳಿನಱಿಯಲಾದ ಕಾಡ ಪೞವಾವಿಗೆಗಳೊಳಂ (ಕಾದಂಉ. ೨೬೬). [ಪೞ$_1$(<ಪೞದು)+ಬಾವಿಗೆ]

**ಪೞವಿಗೆ** 'ಪೞಯಿಗೆ' ನೋ.

**ಪೞವೆ**, ಪಳವೆ, ಹಳವೆ (ನಾ). ೧. ಬಹುಕಾಲದ ಸಂಬಂಧ; ಹಳೆಯ ನಂಟು: ಪಂಭವಕ್ಕಂ ಪೞವೆಗಂ ಪಾಗುಡಕ್ಕಂ ಪೞಬದ್ಧಕ್ಕಂ . . . ಮೋಕ್ಷಕ್ಕಂ ಮಹಾಸಮುದ್ರದೊಳ್ ಮಹಾನದಿಗಳ್ ಕೂಡುವಂತೆ (ಪಂಪಭಾ. ೯-೯೫ ವ); ದ್ವಾರದೊಳಿರ್ದ ಜನಾರ್ದನನ ಪೞವೆಯ ಕಳತೂರ್ಯಮಂಗಳಕಾರ್ಯದೊಳ್ ಕೊಸನಲಂಕರಿಸಲಟ್ಟಿದಂ (ನೇಮಿಪು. ೬-೧೬೬ ವ); ವಕಾರಕ್ಕೆ . . . ಪೞವೆ, ಎಳವೆ (ಶಮದ. ೨೨೧ ಪ್ರಯೋ). **ಪಳವೆ**: ೧. ಪಳವೆಯುನೆಣಪಡೆ ಮುನ್ನಿನ ಪಳತ್ತನೊಳಗಾದ ಪಾಣ್ಡ್ಯನ್ರಿಪಸುತರೊಳ್ ತಾನೆಳಸಿ ಪಿಡಿದವನೆ ಭೂಪಂ (ಎಕ. XI, ದಾವಣ. ೮೪-೨೪; 1161). **ಹಳವೆ**: ೨. ಹಳೆಯತನ; ಹಳವೆ: ಮೌನಕಳಲುಂಟೆ? ತಾಳಿಮೆಗುಂಟೆ ಹಳವೆ? (ಗೀಖಿಂ. ೩೦-೯೪); ಪ್ರಾಚೀನಕಾವ್ಯಗ್ರಂಥಗಳನ್ನು ಅವುಗಳ ಹಳವೆಯಿಂದ ಎತ್ತಿ ಹೊರತಂದು ತಿರುವಿ ಹಾಕಿದ . . . ಸಾಹಿತಿಯು (ಪಾಶ್ಚಾವಿ. ೪೬೦). 'ಪೞವೆ' ಪರಾ. [ಪೞ$_1$(<ಪೞದು)+-ವೆ]

**ಪೞವೇಂಟ** (ನಾ). ಹಳೆಯದಾದ ಪ್ರಣಯ: ಮಸೆವುದು ಮಾಸಲಿರ್ದ ಪೞವೇಟಮನಿಚ್ಚೆಯ ಬಿಚ್ಚತಿಕ್ಕೆಯಂ ಪೊಸಯಿಪುದು (ಶಾಂತಿಪು. ೮-೯೧); ಪೊಸವೇಟದ ಪೞವೇಟದ ಸುಸಿಲಿನಿದಂ ಪಡೆದುದಳಿಗೆ ಬೆಳಗಪ್ಪಾಗಳ್ (ಅಜಿಪು. ೬-೬೫); ಮಕ್ಕಳ್ಗಾವಗವಿನಾ ಬೇಟಮೆ ಸಾಲ್ಗುಮೆಂದು ಪೞ[ಪಾಠಾಂ. ಟಱ]ವೇಟಮಂ ಪೊಱಗೊಕ್ಕು ಪೆಡೆಗೆ ಹಾರಂ ಪೊಸವೇಟಮಂ ಪೊಯ್ದುಕೊಳಲುಂ (ಅರ್ಥನೇ. ೫-೨ ವ). [ಪೞ$_1$(<ಪೞದು)+ಬೇಟ$_1$(<ಬೇಂಟ)]

**ಪೞಸು**, ಪಳಸು, ಹಳಸು$_1$ (ಕ್ರಿ). ೧. ಹಳೆಯದಾಗು; ಹಳತಾಗು: "ಪೞಸೆಂದು ಜರಾಸಿತಾರ್ಥದೊಳ್" (ಕಣಾಸಿ. ೬೯). ೨. ಆಕರ್ಷಣೆಯನ್ನು ಕಳೆದುಕೊಳ್ಳು; ನೀರಸವಾಗು: ಇಂದಿನ ಚಂದ್ರಿಕೆ ಕಂದು ನಾರ್ತುದೋ ಗಾವರದಿಂಪದೇಂ ಪೞ[ಪಾಠಾಂ. ಬಳ]ಸಿತೋ (ಲೀಲಾವ. ೨-೯೪); ಬಾಯ್ವ್ ಸವಿಗೆಟ್ಟಿ ಚುಂಬನಂ ಪೞಸಿದ ಮಱ್ಚುಮಗ್ಗಲಿಪ ನಾಣ್ಬುಡಿಯುಂ ಸತಿಗಾಗೆ (ಸೂಕ್ತಿಸು. ೮-೩೯೪); ನವವಿಧರತ್ನೋಪಚಾರದಿನೆಂದುಂ ಪೞಸದು ಬೇಟಂ (ಶಮದ. ೨೪೪ ಪ್ರಯೋ); ಪೊಲ್ಲವೇಣ್ ಮನೆಯೊಳೊರ್ಪಾಸಿನೊಳ್ ಕೂಡೆ, ನೀನೊಲ್ದ ತೋಳ್ತಟಿಕ್ಕೆಯದು ಪೞಸಿ ತಣ್ಣಗಾಗುವುದಲ್ತೆ ಬೇಗವರ್ (ಅಂತಿಗೊ. ೩೦-೬೧೧). **ಪಳಸು**: ೩. ಆಹಾರದ ಸ್ವರೂಪ ಹಾಗೂ ರುಚಿ ಕೆಡು; ಆಹಾರವು ಹುಳಿಯಾಗಿ ನಾರು: 'ಪಳಸುಗೂಳು' ಪರಾ. **ಹಳಸು$_1$**: ೧. ಮಾತು ಹಳಸದ ಮುನ್ನ ಕೈಗಳು ಸೋತು ಕೆಗೆದವೆ (ಕುಪ್ಪಾವಿ. ೮-೬೬); ಇಂದಿದ್ದದ್ದು ನಾಳೆಗೆ ಹಳಸುತ್ತದೆ. ಊರೂ ಸಮ; ತಿನ್ನುವ ಊಟವೂ ಸಮ (ಮೂಕಜ್ಜಿ. ೧೬೩); ಯಾವ ಹಳಸಿದ ತತ್ವಜ್ಞಾನವನ್ನು ರಾಯರು ಪ್ರಚಾರಪಡಿಸಿದವರಲ್ಲ (ಕಂಬಹು. ೧೨೧). ೩. ಕ್ಷಾಮದ ಕಾಲವು ಹೇಳುವುದಿಲ್ಲವು ಅನ್ನವು ಹಳಸಿಹುದೆಂದು (ಇಂಚಾಪ. ೨೨೫-೧೧); ಬಾನಿಯಲ್ಲಿ ಹಳಸಿದ ತಿಂಡಿ (ಚಂಡೆಮ. ೬-೧೪);

ನಾಯಿ ಹಸಿದಿತ್ತು, ಹಿಟ್ಟು ಹಳಸಿತ್ತು (ಗಾದೆ). ೪. ಹಾಳಾಗು; ಕೆಡು; ಹಸಗೆಡು: ಹಳಸಿದಗ್ಗಳಿಕೆಗಳ ವಿಲಾಸಲುಗಳೆದ ಬಿರುದಿನ . . . ಕಳವಳದ ಕನಸುಗಳೆಲಿದ್ದುದು ರಾಯನಾಸ್ಥಾನ (ಕುಮಾರವ್ಯಾಸ. ೧-೨೦); ಹಳಸಿದುದು ಯಜ್ಞಗಿಜ್ಞದ ಮಾತು (ಜೈಮಿ. ೩೧-೨೮); ನೆಲದೊಳೊರ ಗಿರ್ಪವಳ ರಮಣನ ಹಳಸಿದೊಡಲನು ತೋರಾ (ರಾಮಾಸಂ. ೬-೩-೧೬); ಚಾಲುಕ್ಯರ ಮನಸ್ಸು ಹಳಸುತ್ತಿದೆ ಎಂಬುದನ್ನು ಹೊಯ್ಸಳರಾಜ್ಯದ ಹಿರಿಯರೂ ಕಂಡುಕೊಂಡಿದ್ದರು (ಸವತಿ. ೧೬೫).

[ಪಟು₁(<ಪಟಿದು)+-ಸು₂]

**ಪಟಹ,** ಪಳಹ₂, ಪಟಿಕ, ಪಟಿವ, ಬಟಿಪ (ನಾ). ೧. ಒಂದು ಬಗೆಯ ಚರ್ಮವಾದ್ಯ; ಪಟಹ: "ಪಟಹಂ ಪಟಹಾಭಿಧಾನದೊಳ್" (ಕರ್ಣಾಟ. ೮೦), ಪಟಹದ ರುತಿ ಮೊಟಗಲ್ (ಚಂದ್ರಪ್ರ. ೧೨-೬೧); ಪ[ಟಗ]ನ ಕಯ್ಯ ಪಟಹಮಂ [ಕೊಂ]ಡು ಬಾಜಿಸುತಿರ್ದಂ (ಬಂಹರಿ. ೫-೧೨ ವ). ೨. ಬೇಟೆಹಾಗೂ ಕಳ್ಳತನದ ಸಂದರ್ಭಗಳಲ್ಲಿ, ಗಾಳಿಯು ನುಗ್ಗದಂತೆ ಕನ್ನಗಳನ್ನು ಮುಚ್ಚಲು ಉಪಯೋಗಿಸುವ (ತಮಟೆಯಂತೆ ಅಗಲವಾಗಿರುವ) ಚರ್ಮದ ಒಂದು ಬಗೆಯ ಸಾಧನವಿಶೇಷ: "ಪಟಹಂ-ಬೇಂಟೆಯು ತೆರೆ; ವಾದ್ಯವಿಶೇಷಂ" (ಶಮದ. ಪರಿ. ೧); ಕೋಪಿನ ತೋಪಿನ ಪಟಹದ ಕೋಪಿನ ಪಾಳಿವದ ಗೋರಿವೇಂಟೆಗೆ . . . ನಡೆತಂದರಲ್ಲಿ ಮುಂದೆ ಪುಳಿಂದರ್ (ಸೂಕ್ತಿಸು. ೩-೧೦೪); ವಿಳಸಿತಯೋಗಚೂರ್ಣತತಿ ಕರ್ಕಟರಜ್ಜು . . . ಪಟಹಮೆನಿಪ್ಪ ಪಾಯಶತಮಂ ತಳೆದು . . . ಕನ್ನಗತ್ತಿ ಸಹಿತಂ ಪೊಣಿಮಟ್ಟಂ (ದಶಕು. ೮-೯೩); ಕನ್ನದಿಂ ಗಾಳಿ ಬಾರದಂತೆ ಮುಚ್ಚುವ ಪಟಹಮಂ ಕನ್ನದೊಳ್ ಸಂದಿಸಿದ ಕಲ್ಲಂ ತೆಗೆವಿರ್ಕುಟಿಂ ಮತ್ತಮನೇಕಚೌರ್ಯಸಾಧನಂಗಳಂ ಕೊಂಡು . . . ಎಟ್ಟರುತಿರ್ದಂ (ದಶಕು. ೮-೯೩ ವ). ಪಹ₂: ೧. ಉಲಿಯುತಿರ್ದಡೆ ಪಳಹಮೆಂತು ನಿರಪೇಕ್ಷೆಯಿಂ (ರತ್ನಕ. ೧-೪ ವ); ಪಳಹದ ಶಂಖದ ಕಹಳೆಯ ನಿನದಂ ಮೊಳಗುತ್ತಿರೆ ದಶದಿಸೆಯೊಳ್ (ವೃಷವಿ. ೫-೨೨ ರಗಳೆ); ಪೆರ್ಗಾಳೆಯ ಪಳಹದ ಕೊಟಲ ಕಂಬಟೆಯ . . . ಭೂರಿನಿನಾದಂ ದೆಸೆ ಮುಟ್ಟೆ ಪಳಂಚಲೆಯೆ (ರಾಮಾಶ್ವ. ೫೦-೧). **ಪಟಿಕ:** ೧. ವಸುದೇವನೊರ್ವನಾ ಪಲಾಯಿಗನ ಕಯ್ಯ ಪಟಿಕ[ಪಾಠಾಂ. ಸಕಳಳ]ಮಂ ಕೊಂಡು . . . ಬಾಜಿಸುತ್ತಮಿರ್ಪಲ್ಲಿ (ಮಹಾನೇ. ೫-೩೪ ವ). **ಪಟಿವ:** ೧. "ಡಿಂಡಿಮಾಭಿಧಾನಂ ಪಟಿವಂ" (ವಸ್ತುಕೋ. ೭೯-೨೬); ಪಟಿವದ ತಿವಳೆಯ ಜುಂಕದ ಮೊಳಸಿನ ಜೇಕಿರದ ಸಿವಿಟಿ ಸಿಪ್ಪಿನ ಉಯದಿಂದೆಟಲದೆ ಕುಣಿದರ್ (ಆದಿಪು. ೫-೩೨); ಕರಡೆಯ ತಾಳದ ಪಟಿವದ ಮದ್ದಳೆಯ ಮಿಕ್ಕ ವಾದ್ಯಮುಮೊಳವೇ (ಗದಾಯು. ೩-೪೯); ಕೊಟಲ ಪಟಿವದ ಪಲವುಂ ಗಿರುಗಟೆಯು ಸಿವುಟಿ ಸಿಪ್ಪಿನ ಕೊರಗಿನ ಕಿನ್ನರದ ಸರಮೆ ಸರಮಾ ಪೊಟಲೊಳ್ (ಸೂಕ್ತಿಸು. ೪-೧೦೪). **ಬಟಿಪ:** ೨. ಆ ಕಳ್ಳರ್ . . . ತನ್ನ ತಂದ ಪೊನ್ನ ಪುಡಿಕೆಯುಮನುಟಿಯುಮಂ ಬಟಿಪಮುಮಂ ಅಲ್ಲಿ ಪಟ್ಟಿರ್ದ ಭಟ್ಟನ ಮುಂದೆ ತಂದಿಕ್ಕಿ (ಪಂಚತಂ. ೨೩೨-೭). [<ಪ್ರಾ. ಪಡಹ./ಸಂ. ಪಟಹ./ತೆಲು. ಬಲಪ, ಬಲ್ಪ]

**ಪಟಿ₁,** ಪಳಿ₁, ಹಳಿ₁, ಹಟಿ₁ (ಕ್ರಿ). ೧. ದೂಷಿಸು; ನಿಂದಿಸು; ಬಯ್ಯು: "ಪಟಿ-ನಿಂದಾಯಾಂ, ವಸ್ತ್ರವಿಶೇಷೇ ಚ" (ಶಮಧಾ); ಪಟಿಗೆ ಮೇಣ್ ಪೊಗಟ್ಗೆ ಮೇಣ್ ನೆವಮಿಲ್ಲದೊಡಿಂತು ಕೈಗಟಿಯೆ ಬಗ್ಗಿಸುಗೆ (ಕವಿರಾ. ೧-೧೩೬); ಭೂತಳಂ ಪಟಿಯೆ ತೇಜಮೆ ಕೆಟ್ಟಪುದು (ಪಂಪಭಾ. ೯-೧೮); ಮುಳಿಗುಂ ಮುರಾರಿ ವಾಕ್ಪತಿ ಪಟಿಗುಂ (ಪಂಚತಂ. ೧೬೫-೭). ೨. ನಾಯಿಯನ್ನು ಅಟ್ಟು,-ಓಡಿಸು: "ಪಟಿಯೆನಲ್ ವರವಸ್ತ್ರದಲ್ಲಿ . . . ಕುನ್ನಿಯಂ ಪೊಜವಡಿಪ ನುಡಿಯೊಳಂ ವರ್ತಿಸಿರ್ಕುಂ" (ಸಂಜೀವ. ೧೮). ೩. (ಅಲಂ) ಮೀರು; ಅತಿಶಯಿಸು: ವಿಭೂಷಣಕಾಂತಿ ಸುರೇಂದ್ರಚಾಪಮಂ ಪಟಿಯೆ (ಚಂದ್ರಪ್ರ. ೧೦-೨೬); ಕಾಂಚನಕುಂಭಮಂ ಪಟಿವ ಪೆರ್ಮೊಲೆಯಂ ನಸುದೋಱುತುಂ (ಉದ್ಭಟ. ೧೦-೬೮); ಸುಟಿಯಂ ಪಟಿದೊಪ್ಪುವ ಪೊರ್ಕುಟಿಂದೆ . . . ಒಪ್ಪುವರ್ (ಕಬ್ಬಿಗಕಾ. ೧೨೧). **ಪಳಿ₁:** ೧. ತನಗೆ ಕವಿತ್ವಮಿಲ್ಲ ಪೆಱರಂ ಪಳಿ[ಪಾಠಾಂ. ಜಱೆ]ದಲ್ಲದೆ ನಿಲ್ಲನಾತನೊಳ್ ಮುನಿವುದನೀತಿ (೧೦೫ಕ. ೧-೨೯); ಬಡವರಾದವರನು ಪ[ಪಾಠಾಂ. ಹ]ಳಿಯ ದಿರೆಚ್ಚಱಿಕೆ (ಪುರಂದ. ಧಾ. ೫-೯೬-೪); ಪರಿಚಾರಮೆಂದು ಪಳಿಯದೆ ಪಿರಿದು ಕಿಱಿದುಗಳ ಭೇದವನೆಣಿಸದೆ ನಿರವಿಸಿದುದನೆಸಗುವುದು (ಹದಿಬ. ೩-೩೩); ಪಳಿವುದು ಲೋಕಂ ತಂದೆಯ ನಿಳಯದೆ ಪತಿಯುಳ್ಳ ಸತಿಯುಮಿರೆ (ಶಾಕುಂತ. ೩೬-೧೧೭). ೩. ಪಂಚಶರಮಂ ಪಳಿವ ನುಣ್ಪಿರಲ್ (ಶಾಂತಿ. ದೇ. ೨೮೯-೧೭); ಮುಖಂ ಮುಕುರದಿರವಂ ಪಳಿದುದು (ಜೈಮಿ. ೫-೪೪); ಮಾದಳಿರ ಪಳಿವ ಚೆಂದುಟಿಯು ಸವಿಗೆ . . . ಬಯಸಿ (ಜೈಮಿಭಾ. ೩-೧೦); ಪಂಚಬಾಣನ ಚೆಲ್ವ ಪಳಿವ ಜಯಂತನನಂತೆ ಗಮನೆಯೆಯಱಿದಳು (ಕಂಸವಿ. ೯-೧೯೯). **ಹಳಿ₁:** ೧. ಕಳಬೇಡ ಕೊಲಬೇಡ . . . ತನ್ನ ಬಣ್ಣಿಸಬೇಡ ಇದಿರ ಹಳಿಯಲು ಬೇಡ ಇದೆ ಅಂತರಂಗಶುದ್ಧಿ ಇದೆ ಬಹಿರಂಗಶುದ್ಧಿ (ಬಸವ. ೨೩೫); ರೋಗಿ ಹಳಿದೊಡೆ ಹಾಲು ಹುಳಿಯಪ್ಪುದೆ (ಹಚಶಾ. ೧-೨೭); ಅವ ಹಿರಿಯರ ಹಳಿದೆನೋ ಮುನ್ನಾವ ಧರ್ಮವ ತುಳಿದೆನೋ (ಕೌಶಿರಾ. ೩೦-೪೩); ಸ್ಥಲವೊಂದು ನಿನಗಿಹುದು ವಿಶ್ವವೃಕ್ಷದೊಳಂತು ಹಳಿಯದಿರು ನಿನ್ನಿರವ (ಮಂಕುಕ. ೫೬೨). ೩. ಇಳೆಗೆ ನಳಕೂಬರ ಜಯಂತರ ಚೆಲುವ ಮದನನ ರೂಪರೇಖೆಯ ಹಳಿವುದಾ ನಳನೃಪನ ನಿಜಸೌಂದರಿಯ ಲೋಕದಲಿ (ನಳಚ. ೨-೩೬). **ಹಟಿ₁:** ೧. 'ಹಟಿಸು' ಪರಾ.

[ದೇ.॥ ತಮಿ. ಮಲ. ಪಟಿ; ಕೊಡ. ಪಳಿ]

**ಪಟಿ₂,** ಪಳಿ₂, ಪಳಿವು, ಪಟಿವು, ಹಳಿ₃, ಹಳಿವು₁, ಹಟಿವು (ನಾ). ೧. ಅನ್ಯಾಯವಾದ ಆರೋಪ; ನಿಂದೆ: "ತೆಗಟ್, ಪಟಿ . . . ಅಱಕಂ-ಈ ೬ ನಿಂದೆ" (ಕಶಸಾ. ೫೭-೨೫೬); ತನ್ನ ಮುಂ ಗೆಯ್ದ ಪಾಪಮುಮಯಶಮುಂ ಪಟಿಯುಂ ಪೊಲ್ಲಮೆಯುಮಂ ನೀಗಿದಂ (ವಡ್ಡಾರಾ. ೧೬೭-೨೬); ಲೋಕದ ಪಟಿ ಪೊರ್ದದೆ ಮಾಣ್ಗೆ ಧರ್ಮಯುದ್ಧದೊಳೆಸಗಿಂ (ಆದಿಪು. ೧೪-೧೦೨); ಚಿತ್ರಭ್ರಾಂತಿಯುಮಂ ಪಳಿಯ ಪಟಿಯುಮಂ ಪಿಂಗಿಸಿದರ್ (ಪಂರಾಮಾ. ೧೬-೫೬). ೨. ನಾಯಿಯನ್ನು ಅಟ್ಟುವುದು,-ಓಡಿಸುವುದು: "ಪಟಿ=ವಸ್ತ್ರವಿಶೇಷಂ; ದೂಷಣಂ; ನಾಯ ಸೋವುವುದು; ಲೋಹದ ಘಟ್ಟಿ" (ಶಮದ. ಪರಿ. ೧); ಅಂತು ಪರಿದು ನೆರೆದ ರಾಜನ್ಯಕಮಂ ಪಟಿ [ಪಾಠಾಂ. ಳ್ಳಿ]ಯಂತೆ ಪಲಾಯನಶೀಲಮಾಡಿ ಹೇಮಪ್ರಭನಂ ಮುಟ್ಟೆವಂದು (ಪಂರಾಮಾ. ೩-೫೮ ವ). **ಪಳಿ₂:** ೧. ಅಳಿಪಿಲ್ಲದೆ ನೆಗಟ್ದರೆಯುದ್ದುವಸ್ಸುರರಪುರಮಂ ಪಳಿಗಳ್ಕದಳಿವ ಪಾತಕರಿಳಿವರ್ಗ್ಗಳಗಳನೆ ನರಕಗತಿಗೆ (ಸೌಇಇ. XX, ೪೭-೩೯; 1074); ಗೋವಳತಿ ಗೋಪಿಯ ನಂದನ ಕಂದನಾದನೆಂಬಾ ಪಳಿಯೆಲ್ಲಮಂ ಕಳೆಯಲ್ (ಕೊಲ್ಹಾಪುಶಾ. ೯-೩೮; 1147); ಪಳಿವಾಂತ ಲವಣಾಬ್ಧಿ ಸಂಜಾತವಿದ್ರುಮವನಿಳಿಸಿ (ನಂದಿಮಾ. ೮-೩೬); ನಮ್ಮಯ ಕುಲದ ಯಶಶ್ಚಂದ್ರಿಕೆಯ ಪಾಳ್ಗೆಯ್ದ, ಪಳಿಯ ಕರ್ದಿಂಗಳಂ ಮೆತ್ತಿ (ಚಿತ್ರಾಂಗ. ೫೯-೧೬೩೪). **ಪಳಿವು:** ೧. ಕಳವು ಪುಸಿ ಹಾದರ . . . ಪಳಿವು ವಂಚನೆ ಜಾತಿಸಂಕರ ಕೊಲೆ ವಿರೋಧವು ವಿಕೃತಮಾಯಾವಳಿಗಳೆಂಬಿವು ನಿನ್ನೊಳಿಲ್ಲಲೆ ರಾಯ(ಕುಮಾರವ್ಯಾಸ. ೧-೪೫); ಕಾರ್ಪಣ್ಯಮಳಿವು ಪಳಿವನ್ಯಾಯ . . . ಕರ್ಕಶಂಗಳಿವು ಮೊಳೆದೋಱುವು (ಜೈಮಿಭಾ. ೨-೫); ಪುರಜನರ ಬಿಱುನುಡಿಗೆ ತಡೆದೆ ಜಾತಿರಾಜರ ಪಳಿವ ನೊಳಕೊಂಡೆ (ಶ್ರೀರಾಮ. ೩-೫೦); ಪಳಿವಾಯಿತು ಕ್ಷತ್ರಿಯ ಕುಲಕೆ

(ಶೋಗಿಲೆ. ೧೯-೧೦). ೩. ನಿಂದೆಗೆ ಗುರಿಯಾಗುವಂತಹುದು; ಹೀಯಾಳಿಕೆಗೆ ಪಾತ್ರವಾಗುವಂತಹುದು: ನಿನ್ನ ನಿತಂಬಕ್ಕೆ ಪುಳಿನ ಸ್ಥಳಂ ಪೞಿವು ನಿನ್ನ ಬಟ್ಟದೊಡೆಗೆ ಬಾಳೆ ಬಹಿಷ್ಕಾರಂ (ನಂಬಿರ. ೧೪-೧೮).
**ಪೞಿವು**: ೧. "ಪೞಿವೆಂದೆನೆ ನಿಂದೆ" (ಚತುನಿ. ೪೬); ಪೞಿವನಾಯವ ನೋಡದನ್ಯರೊಳೆ ದೂಱಿಟ್ಟಿಲ್ಲರಂ ಬಾಧಿಪಾ ಕಳವಾಱಂ ಬೆಳವಾರನ್ನೆ (ಸೋಮೇಶ. ೬೬); ಕಳವು ಪಿಸುಣ್ ಪಸವು ಬಱಂ ಪೞಿವೞಿ ವಲಸೊಲಸು ಕುತ್ತುವಿಲ್ಲಾ ನಾಡೊಳ್ (ಶಬ್ದಾನು. ೧೪೦ ವ್ಯಾಖ್ಯಾ).
**ಹಳಿ$_3$**: ೧. ಹಳನೇಹವಿಹುದೆಂದು ಎಳಸಿ ಹೋಗುವನೆಗ್ಗ ಕಳವಳ ವಳ್ಳ ಹಳಿಯುಳ್ಳ (ಸರ್ವಜ್ಞ. ೧೮೦೬); ಕಳ್ಳನೆಂಬ ಹಳಿ ಮೆರಸಲೇಂ ನೀ ಕಳ್ಳರ ನಡು ತೂಗಾಡಿದೆಯಾ? (ಗೀವಿಂ. ೪೧-೯); ಅಯ್ಯೋ ನಿಮಗೆ ಇಂಥ ಹಳಿ ತರೋದು ನನ್ನ ಹಣೇಲಿ ಬರೆದಿತ್ತಲ್ಲ (ಚಿಕಂ. ೨೧೧).
**ಹಳಿವು$_1$**: ೧. ಹಳಿವು ಹೊಱದ ತಿಳಿವಿನಲ್ಲಿ ಕಳೆ ಕಣ್ಡೞಿದು ಉಳಿದ ನಿಜದ ಶೇಷ ಶ್ರೀಗುಹೇಶ್ವರ ನಿಮ್ಮ ಬಸವಣ್ಣ (ಅಪಚಂ. ೨೯೨-೧೩೦೫); ರಕ್ಷಿಪನ ಹಳಿವಂ ಕೇಳಲಿನಗೆಂತು ಸೈರಿಸಲ್ಪಪ್ಪುದೇ (ಇಱಿರ. ದೇ. ೧೦೬-೭); ಭ್ರಮಿಯಿವನು ನೆಱೆ ಹಳಿವ ತಹನೀ ಶ್ರೋತ್ರಿಯರ ಕುಲಕೆ (ಸಂಭಪ. ೩೧-೧೪); ನಿಮ್ಮಯ ನುಡಿಗೆ ಹೊದ್ದದು ಹಳಿವು (ತೊರಂ. ೧-೯-೨೬). ೪. ತೊಂದರೆ; ಕೇಡು; ವಿಪತ್ತು: ಹಲವು ದೇಶಗಳೆಲ್ಲ ದುರ್ಭಿಕ್ಷದಿಂದಳಿಯೆ ಹಳಿವಿಲ್ಲದಿರ್ದುದಾ ಗೌತಮಾಶ್ರಮದಲ್ಲಿ ಮುನಿತಪಸ್ತೇಜದಿಂದ (ಲಕಿಚಂ. ೨೪-೩). **ಹೞಿವು**: ೧. "ನಿಃಷಮ ದುಷ್ಷಮ ಗರ್ಹ್ಯ ಎಂಬಿವು ಹೞಿವಿನೊಳ್ ಅಪ್ಪುವು" (ನಾಚಿಂ. ೬).
[<ಪೞಿ$_1$./ತಮಿ. ಮಲ. ಪೞಿ]

**ಪೞಿ$_3$**, ಹಳಿ$_4$, ಹೞಿ$_2$ (ನಾ). ೧. ಲೋಹದ ಘಟ್ಟಿ ಅಥವಾ ಕಂಬಿ: "ಪೞಿ = ವಸ್ತ್ರವಿಶೇಷಂ; ದೂಷಣಂ; ನಾಯ ಸೋವುವುದು; ಲೋಹದ ಘಟ್ಟಿ" (ಶಮದ. ಪರಿ. ೧); "ಪೞಿಯೆನಲ್ ವರವಸ್ತ್ರದಲ್ಲಿ ದೂಷಣದಲ್ಲಿ ಲೋಹಮಂ ಕರಗಿಸಿದ ಘಟ್ಟಿಯೊಳ್ ಕುನ್ನಿಯಂ ಪೊಱವಡಿಪ ನುಡಿಯೊಳು ವರ್ತಿಸಿರ್ಕುಂ" (ಸಂಜೀವ. ೧೮). **ಹಳಿ$_4$**: ೧. ಕಾದ ಲೋಹದ ಹಳಿಯಂವೊಲು ಕೆಂಪಾದವಸುರರ ಮೋಱೆಗಳು (ಕುವ್ಯಾಕ. ೭-೨೮); ಹೊಳಕಿದುದು ಕಿರಣಾಳಿ ಹೇಮದ ಹಳಿಗಳಲಿ . . . ಮಣಿ ಹವ್ಯಾರ್ದಿ ಹಂತಿಗಳ ಸೊಗಸಿನಲಿ (ತೊರಂ. ೫-೨-೨೪). ೨. ಉಗಿ ಬಂಡಿಯ ಸರಳು; ರೈಲುಕಂಬಿ: ಯಾರೋ ಹಳಿ ಕಿತ್ತುತ್ತಾರೆ. ಡಬ್ಬಿ ಉರುಳಿಸುತ್ತಾರೆ (ಹಾಸುಹೊ. ೨೮); ಹಳಿಯ ಮೇಲೋಡುತಲಿದೆ ರೈಲು (ಚಂದ್ರವೀ. ೧೦೫-೧೮). ೩. ಬಂಡಿಯ ಗಾಲಿಯ ಕಬ್ಬಿಣದ ಪಟ್ಟಿ,-ಪಟ್ಟೆ: ಕಮ್ಮಾರರು ಗಾಲಿಗೆ ಹಳಿಯನ್ನು ಬಿಗಿಯುವಾಗ (ಮುಂಬಯಿ. ೫-೧೧೫): ಒಂದರ ಹಳಿ ಬಿಟ್ಟಿದ್ದರೆ ಮತ್ತೊಂದರ ಅಚ್ಚು ಮಣಿದು ಹೋಗಿದೆ (ಜೆಳಭಾ. ೧೬೬); ಹಳಿ ಕಟ್ಟಲು ತಂದಿಟ್ಟಿದ್ದ ಒಂದು ಗಾಡಿಚಕ್ರಕ್ಕೆ ಡಿಕ್ಕಿ ಹೊಡೆದು, ಅದನ್ನು ಮೈ ಮೇಲೆ ಬೀಳಿಸಿ ಕೊಂಡಿದ್ದನು (ಮಲೆಮ. ೨೮೮). ೪. ಹಳಕು; ಚೂರು; ಹರಳು: ಪಚ್ಚೆಗರ್ಪುರದ ಹಳಿಯನೊಡದಾ ಧೂಳಿಯಂ ಹರಹಿ (ಪದ್ಮರಾ. ೮-೯೨); ವಾಟಿಯೊಳಗೆಯುಪ್ಪಿನ ಹಳಿಯ ತಡಹಿಕೊಂಡು ಗೊಂದಣದ ಸಂಭಾರವಂ ಮೆತ್ತಿ . . . ಮಡಕೆಯೊಳಿರಿಸಲದು ತುಂಬುವಾಳೆಗಾಯ್ವೆಸರಾದವು (ಸೂಪಶಾ. ೪-೭೪). ೫. ಮೊಸರು ಮೊದಲಾದುವುಗಳ ಗಡ್ಡೆ,-ಗರಣೆ; ಧೈಂಡಿ: ನೆನ್ನೆ ಅವರ ಮನೆಯಲ್ಲಿ ಬಡಿಸಿದ ಹಳಿ ಮೊಸರು ಸೊಗಸಾಗಿತ್ತು (ರೂಢಿ). **ಹೞಿ$_2$**: ೧. ಮೇರುವಿನ ಹೞಿಗಳೀಂ ಭಂಡಾರಕ್ಕೆನ್ನಾಣೆ ವಜ್ರಧಾರೆಗಳಿಂಟಂಕಾರಿಸಿ ಸಲಿಸದೊಡೆಂದು ಬಲಾರಿಗೆ ದಿವಿಜಾರಿ ರಾಯಸಂ ಬರೆಯಿಸುವಂ (ಅನಂಪು. ೧೩-೮); ಕಾಯ್ದ ಕಬ್ಬೊನ್ನ ಹೞಿಗಳಿಂದೇರ್ವರಿಯನಮರ್ಚುವುದುಂ (ಶಾಂತೀಶ್ವ. ೯-೧೧೦ ವ). ೪. ಆಕುಂಚಿತವಾದ ವಾಮಪಾದಾಂಗುಷ್ಠದೊಳ್ ಕೊಡರ್ದ ಪಾದುಕದ ಪಲ್ಲೆಯಂ ಪದ್ಮರಾಗದ ಹೞಿಯೊಳೞುಪಿ ತ್ರಿಭಂಗಿ ಸಂಗಳಿಸೆ ನಿಂದು (ಮಹಾನೇ. ೧೪-೬೨ ವ). 'ಫಳಿ$_2$' ಪರಾ.

**ಹಳಿಹಳಿ** (ದ್ವಿರುಕ್ತಿ): ಹಳಿಹಳಿಯೇಳ್ವ ಮುಗಿಲ ಹೊರೆಯೊಳು ಕೂಡುವೆಳೆವಾಂಬಟ್ಟೆಗಾದರಲ ಲಲಿತಾಂಗಸೌರಭ್ಯವ ತಲೆವೊಱೆವೊತ್ತು ಸುಳಿವ ಗಾಳಿಗೆ ಮೈಯನಿತ್ತ (ಶ್ರೀಪಾಲ. ೪-೬೬); ನನ್ನ ತಟ್ಟೆಗೆ ಹಳಿಹಳಿಯಾದ ಮೊಸರನ್ನು ಹಾಕಿದರು (ಚೆಂಗಾಳ್ವ. ೫೮).

**ಪೞಿ$_4$**, ಪಳಿ$_3$, ಪೞು$_3$ (ನಾ). ೧. ಕಸ; ಕೊಳೆ; "ಕಳೆ" (ಚತುನಿ. ೬. I, ೬೦). **ಪಳಿ$_3$**: ೨. ಪೈರು ಕಟಾವಾದ ಮೇಲೆ ಉಳಿಯುವ ಕೂಳೆ: ನಟ್ಟು ಕಡಿಸಿ ಹಸನ ಮಾಡಿದರೂ ಅಜಮಾಸು ಇಷ್ಟೇ ಹಣ ವೆಚ್ಚವಾಗುತ್ತದೆ. ಪಳೀ ಆರಿಸುವುದು ಬೇರೆ (ಕಭಾಗ. ೨೬೭). **ಪೞು$_3$**: ೧. "ಬಿಂಜದೊಳ್ ಕಸದೊಳಂ ಪೞು" (ಶಬ್ದಮಂ. ೧೧೩).

**ಪೞಿ$_5$**, ಪಡಿ$_4$, ಪಳಿ$_4$ (ನಾ). ಒಂದು ಬಗೆಯ ಉತ್ತಮವಾದ ಬಟ್ಟೆ: "ತೆಗೞು ವಾಸ ಪೞಿಯೆನಿಕು" (ಶಬ್ದಮಂ. ೧೧೬); ಅರ್ಘ ಗಪ್ಪಡಮಂ ಬಿಸುಟ್ಟು ಪೞಿಯಂ ಸಯ್ಯುಟ್ಟುಕೊಂಡಿರಿಂ (ಪಡ್ಮಾರಾ. ೯೩-೧೬); ಪೞಿ ಚಿತ್ರಾವೞಿ ಜೋಗಂ ಪೞಿಯಂ ದೇವಾಂಗಮೆಂಬ ವಸನಂಗಳನೇಂ ಗೞಿಯಿಸುವವೊ ಮಡಿವಳ್ಳನ ಪೞಿಯತನನೆ ಪೋಲ್ತು ವಿಶದವಸನಾಂಗಕುಜಂ (ಆದಿಪು. ೫-೩೪); ಚೀನದ ತಳಿರ್ವಟ್ಟೆಯ ಪೞಿಯ ವೞಿಯ ದೂಸಿಗವಸರಂ (ಲೀಲಾಪ. ೭-೧೯). **ಪಡಿ$_4$**: "ಪಳಿ (ಪಡಿ)—ಪಟೀ = ಬಟ್ಟೆ" (ತದ್ಭಕೋ. ೨೫). **ಪಳಿ$_4$**: ಚಿತ್ರದಣ್ಣಂ ಪಳಿಯೆಸೆವ ಝುಳಂಬಂ ಗಜೇನ್ದ್ರಂ ತುರಂಗಂ (ಎಇ. XIII, ೩೩೦-೧೩; 929); ಅಯ್ಯೂರ್ವ್ವರು ಬಿಟ್ಟ ಧರ್ಮಮೆಂತೆನೆ ಆನೆ ಮಾಣಿಕ ಪಳಿ ಪತ್ತಾವಳಿ ಅಡಕೆ ಮೆಳಸು (ಕಇ. V, ೩೩-೫೩; 1176); ಪಳಿಯ ನುಟ್ಟನು ಮಲ್ಲಗಂಟಿನಲಿ (ಕುವ್ಯಾವಿ. ೩-೭೯); ಮಲಯಜದಣ್ಪು ಪೊಂದೊಡಿಗೆ ಪಟ್ಟೆಯ ದಟ್ಟ ಪಳಿಯ ಚಲ್ಲಣ (ಕುರಾಸಾಂ. ೧೧-೩೭).
[<ಸಂ. ಫಲಿ]

**ಪೞಿ$_6$** 'ಪಡಿ$_3$' ನೋ.

**ಪೞಿಕೆಯ್** 'ಪೞಿಕೆಯ್' ನೋ.

**ಪೞಿಕೆಯ್**, ಪಳಿಕೆಯ್, ಪೞಿಕಯ್ (ಕ್ರಿ). ೧. ದೂಷಣೆ ಮಾಡು; ಹೀಯಾಳಿಸು; ನಿಂದಿಸು: ಪೞಿಕೆಯ್ದು ತೊಟ್ಟನುೞಿ ದಂತುೞಿದ ಮಹಾಪುರುಷರಱಿಯದುೞಿದರೆ ಸಿರಿಯಂ (ಕವಿರಾ. ೩-೧೭೫); ಪೞಿಕೆಯ್ದು ಬಂದು ನಲ್ಲಳ ಮುಳಿಸನೊಳಕೊಂಡು (ಆದಿಪು. ೧೨-೨೯ ವ); ಶಿಶುಪ್ರಕರಮನೇನಗಲ್ಚಿದೆನೊ ಧರ್ಮಮನೇಂ ಪೞಿಕೆಯ್ದೆನೋ (ಸುಕುಮಾ. ೯-೧೦೨); ಚೋಳನಂ ಪೞಿಕೆಯ್ದು ಮಾಳವನನಿೞಿಕೆಯ್ದು ಲಾಳನಂ ಱೋಡಾಡಿ (ಜಗವಿ. ೧೬-೧೧೮ ರಗಳೆ). ೨. ಕೆಟ್ಟ ಕೆಲಸವನ್ನು ಮಾಡು; ತಪ್ಪು ಮಾಡು: ಇಂ ವಿಷಯ ಸುಖಕ್ಕೆಱಗೆಂ ಪೞಿಕೆಯ್ದು ತೊಟ್ಟನುೞಿವಂತುೞಿವೆಂ (ಅಜಿಪು. ೨-೮೨); ಅಳಿಪಿ ಪೞಿಕೆಯ್ವವನಂ ಬೀಸಿ ಬಿದಿರ್ದಿಕ್ಕಿ ಕಳೆವುದು (ಲೀಲಾಪ. ೧೪-೪೪). **ಪಳಿಕೆಯ್**: ೧. ಪಳಿಕೆಯ್ವಂ[ಪಾಠಾಂ. ಕೈವಂ] ಖಳನೆಂದಾಂ ಮುಳಿಯೆಂ (ಶಬಶಂ. ೧-೧೯). ೩. (ಆಲಂ) ಅತಿಶಯಿಸು; ಮೀರು: ಸರಸಿಯಂ ಪಳಿಕೆಯ್ವ ನಾಭಿಮಂಡಲವಲ್ಲಿ (ಕಾರಿರ. ದೇ. ೨೮೯-೧೩). **ಪೞಿಕಯ್**: ೧. ಪಿತ್ತೇಶನೇನಿತೊತ್ತಡಂ ಪೞಿ ಕಯ್ವರ್ ವರುಣಂ ಕರಂ ಕರುಣದಿಂ ಲಲ್ಲೆಯ್ಸೆ ತಾವೊಲ್ಲರ್ (ಸೂಕ್ತಿಸು. ೪-೧೩೧). [ಪೞಿ$_2$ + ಕೆಯ್$_1$]

**ಪೞಿಗೞಿ** (ಕ್ರಿ) ದೋಷರಹಿತವಾಗು; ನಿಂದೆಯಿಲ್ಲದಿರು:

ಅಹಮಿಂದ್ರರ್ . . . ಪಾಪಹರಂಗೆಱಗುವರೆನಿಸಿದ ಮಹಿಮೆಯ ಪೞಂಗೞಂದ ಪರಮಕೋಟಿಯೋಳಿರ್ಪರ್ (ಶಾಂತಿಪು. ೯-೧೨೪).
[ಪೞ$_2$ + ಕೞ$_1$]

**ಪೞಂಗಾಳೆಗ** (ನಾ). ಪ್ರತಿಯಾದ ಯುದ್ಧ,—ಕಾಳಗ: ಅೞುಮರುಳಾದಂತಾ ಲತೆಯೊಳ್ ಪೞಂ[ಪಾಠಾಂ. ಬು]ಗಾಳೆಗಂಗಾದಿ ಬರೆವರೆ (ಪಂಪಭಾ. ೫-೧೨ ವ). [ಪೞ$_6$(<ಪಡಿ$_3$) + ಕಾಳೆಗ]

**ಪೞಂನುಡಿ$_1$** (ಕ್ರಿ). ನಿಂದೆಯ ಮಾತನ್ನಾಡು; ಅಪವಾದವನ್ನು ಹೊರಿಸು; ದೂಷಿಸು: 'ಪೞಂನುಡಿಹ' ಪರಾ.
[ಪೞ$_2$ + ನುಡಿ$_1$]

**ಪೞಂನುಡಿ$_2$**, ಪಳಿನುಡಿ (ನಾ). ನಿಂದೆಯ ಮಾತು; ಅಪವಾದ; ದೂಷಣೆ: ವಿಜ್ಞಾನವಿಕಲಂ ಪಶುಪ್ರಾಯಂ ಎಂಬುದು ಮೊದಲಾಗೆ ಪೞಂನುಡಿಯುಂ ಸೈರಿಸುವನುಂ (ತತ್ತ್ವಪ್ರ. ೩೩೬). **ಪಳಿನುಡಿ**: ನೀವೆಲ್ಲ ಪಳಿನುಡಿಯ ಬಳಿಯುಲೆಂದೇ ಕೇಳಿಗೊಂಡಿರಾ ಹೇಳಿ? (ನಡಿದಾ. I, ೪೫೮). [ಪೞ$_2$ + ನುಡಿ$_2$]

**ಪೞಂನುಡಿಹ** (ನಾ). ದೂಷಣೆಯ ಮಾತನ್ನಾಡುವಿಕೆ; ನಿಂದಿಸುವಿಕೆ: "ಅವರ್ಣವಾದಃ, ಪೞಂನುಡಿಹ" (ತಸೂವ್ಯ. ೨೧೪).
[ಪೞಂನುಡಿ$_1$ + -ಹ$_2$(<-ಪ$_2$)]

**ಪೞಂಯತ** 'ಪೞಂಹತ್ತ' ನೋ.

**ಪೞಂಯತ್ತ** 'ಪೞಂಹತ್ತ' ನೋ.

**ಪೞಂಯಱ** 'ಪಡಿಯರ' ನೋ.

**ಪೞಂವಾವುಗೆ** (ನಾ)— ಮಂಚವನ್ನು ಇಡಲು ಮಾಡಿದ ಎತ್ತರದ ಪೀಠ,—ವೇದಿಕೆ: "ಪೞಂವಾವುಗೆಯ ವಲಂ ಪ್ರತಿಪಾದುಕಂ" (ಸಂಜೀವ. ೧೯); ಪಳಿಕಿನ ಪೞಂವಾವುಗೆಯಿಂ . . . ರಂಜಿಪ ರನ್ನದ ಸೆಳೆಮಂಚದ ಮೇಲೆ ಲೀಲೆಯಿಂ ಕುಳ್ಳಿರ್ದಳ್ (ಪಂರಾಮಾ. ೩-೭೫); ನಿಶ್ಶ್ರೇಯಸಶ್ರೀಯ ಸಿರಿಮಂಚದ ಕೆಲಗೆ ಪೋಳೆವ ಪೞಂವಾವುಗೆಯಂತೆ ಪಳಚ್ಚನಾದಚ್ಚವಳುಕಿನ ಸಮಾಧಿಶಿಲಾಪಟ್ಟಕಮುಂ (ಅನಂಪು. ೧೪-೭೮ ವ); ತಳಾರಳ್ಕೆ . . . ಪ್ರತಿಪಾದುಕಂ—ಪೞಂವಾವುಗೆ (ಶಮದ. ೨೧ ಪ್ರಯೋ). [<ಸಂ. ಪ್ರತಿಪಾದುಕಂ]

**ಪೞಂವು** 'ಪೞ$_2$' ನೋ.

**ಪೞಂವೊಂದು** (ಕ್ರಿ). ಅಪವಾದವನ್ನು ಹೊಂದು; ನಿಂದೆಗೊಳಗಾಗು: ಪೆತ್ತರ್ ಪೞಂವೊಂದದವೊಲಿತ್ತೆಡೆಯೊಳಡಂಗಿ ಬಾಚ್ಚುದುತ್ತಮವಲ್ತೇ (ಚಿಕವಿ. ೬-೨೮೫). [ಪೞ$_2$ + ಪೊಂದು$_1$(<ಪೊರ್ದು)]

**ಪೞಂಹತ** (ನಾ). ತಡೆ; ವಿಘ್ನ: "ಪೞಂಹತ ಪ್ರತಿಹತಮುದಕ್ಕು" (ಕವಿಕಂ. ೨೪೩). [<ಸಂ. ಪ್ರತಿಹತ]

**ಪೞಂಹತ್ತ**, ಪಳಿಹತ, ಪಳಿಹತ್ತ, ಪೞಂಯತ, ಪೞಂಯತ್ತ, ಫಳಿಹತ (ನಾ). ೧. ಒಬ್ಬನಿಗೆ ಬದಲಾಗಿ ಬರುವವನು; ಪ್ರತಿನಿಧಿ: ತಳಾರಳ್ಕೆ—ಪ್ರತಿಹಸ್ತಂ-ಪೞಂಹತ್ತಂ; ಪ್ರತಿಪಾದುಕಂ-ಪೞಂವಾವುಗೆ (ಶಮದ. ೨೧ ಪ್ರಯೋ). **ಪಳಿಹತ**: ಅವರ ಪಳಿಹತರು ಕೋಣವತ್ತಿಯ ಟಣಾಂತರದ ಪೆರ್ಗ್ಗಡೆಗಳು (ಕಇ. IV, ೨೨-೩೫; 1024); ವ(ಥ)ರ್ಮ್ಮಕಾರ್ಯೋದ್ದೇಶದಿಂ ತನ್ನ ಪಳಿಹತಂ ಸಿಂಗರಸನಂ ಕರೆದು (ಎಇ. XVIII, ೧೯೧-೬; 1104); ಮೊದಲ ಪತ್ಥಳೆಯ ಪಳಿಹತ ಮಹಾದೇವಣ್ಣನು (ಎಇ. XIII, ೩೨೨-೫೫; 1126) ೨. ಪ್ರತಿನಿಧಿಗೆ ಸಲ್ಲುವ ಸುಂಕ: ಶ್ರೀಕರಣಗಳು ಪಳಿಹತವಂ ಬಿಟ್ಟವಾಗಿ ಪ್ರತಿವರ್ಷಂ ಸಲ್ವಂತಾಗಿ ಬಿಟ್ಟ ಸ್ಥಿತಿ (ಮೈಆರಿ. ೧೯೪೦, ೧-೭೫; ಸು. 1300). **ಪಳಿಹತ್ತ**: ೧. "ಪಳಿಹತ್ತ (ಪ್ರತಿಹತ್ತ)-ಪ್ರತಿಹಸ್ತ=ಪ್ರತಿನಿಧಿ" (ಶಬ್ದಕೋ. ೨೫); ಅವನನ್ನು ತನ್ನ ಪಳಿಹತ್ತಮಾಡಿ (ಮಂತ್ರಶ. ೧೨-೮). **ಪೞಂಯತ**: ೧. ಪೞಂ . . . ದೇವಾಂಗಮೆಂಬ ವಸನಂಗಳನೇಂ ಗೞಂಯಿಸುವವೊ ಮಡಿವಳ್ಳನ ಪೞಂಯತನನೆ ಪೋಲ್ತು ವಿಶದವಸನಾಂಗಳುಜಂ (ಆದಿಪು. ೫-೩೪). **ಪೞಂಯತ್ತ**: ೧. "ಪೞಂಯತ್ತ [ಪಾಠಾಂ. ಪೞಂಹತ್ತ]ಮೆಂದು ಪ್ರತಿಹಸ್ತಂ" (ಶಶಸಾ. ೭೩-೭೫೬). **ಫಳಿಹತ**: ೧. ಅವರ ಫಳಿಹತ ಪಾಕಣ್ಣನು (ಎಕ. XI, ದಾವಣ. ೧೪೧-೩೧; 1065). [<ಸಂ. ಪ್ರತಿಹಸ್ತ]

**ಪೞು$_1$** 'ಪೞುವ' ನೋ.

**ಪೞು$_2$** (ನಾ). ಮಿತಿ; ಮೇರೆ; ಎಲ್ಲೆ: 'ಪೞುಗೞಂ' ಪರಾ.
[ದೇ. ॥ ತಮಿ. ಪೞು = ಚೌಕಟ್ಟು]

**ಪೞು$_3$** 'ಪೞ$_4$' ನೋ.

**ಪೞುಗೞಂ** (ಕ್ರಿ). ಮೇರೆ ಮೀರು; ಅತಿಶಯಿಸು: ವಿಚಾರಕ್ಕೆ ಪವಣ್ಗಳೆದ ಗುಣದಿಂ ಕರಂ ಪೞುಗೞಂದುದು ದಯೆ (ಶಾಂತಿಪು. ೧೦-೯೯); ಜಾನಕಿಯನುಜಿತ ಸೆಱೆವಿಡಿದು ಬರುತ್ತುಮಾಕೆಯ ಪೞು[ಪಾಠಾಂ. ಬೞ] ಗೞಂದ ಗಾಡಿಯಂ ನೋಡಿ (ಪಂರಾಮಾ. ೯-೧೬೦ ವ); ಅಬಲಿರದ ಗೃಹಾತನ ವಿಯೋಗದೊಳಾಗೆ ಮನಕ್ಕೆ ಮೊಕ್ಕಳಂ ಪೞುಗೞಂದಿರ್ದ ತನ್ನ ಸಿರಿಯಂ ಮರುಭೂತಿ ಬಿಸುಟ್ಟು (ಪಾರ್ಶ್ವಪು. ೪-೫೦)
[ಪೞು$_2$ + ಕೞ$_1$]

**ಪೞುವ**, ಪಳವು, ಪಳು, ಪಳುವ, ಪಳುವು, ಪೞು$_1$, ಪೞುವು, ಹಳವು$_1$, ಹಳವು$_2$, ಹಳು$_1$, ಹಳುವ, ಹಳುವು (ನಾ). ೧. ಕಾಡು; ಅರಣ್ಯ: ನಿಮಗಿನ್ನುಮ್ಮಳಿಕೆವೇಡ ಪೞುವದೊಳ್ (ನೇಮಿಪು. ೧೦-೪೪). 'ಪೞುವಗಿಚ್ಚು' ಪರಾ. **ಪಳವು**: ೧. ನೈರಿತ್ಯದೊಳು ಬಿದಿರ ಪಳವುಂ ಪಲ್ಮಕುಡಿವುಂ (ಸೌಇಇ. IX-i, ೧೨೧-೪೬; 1057). **ಪಳು**: ೧. "ಪಳುವೆನೆ ಕಾಡು" (ಕಶರ. ೫೮); ಕೇಡಳುಕೆರ್ಯ ಪಳುವನೇಂ ಪಳಿಯೆ ತಪ್ಪ (ಕಾಲೂರ. ೪೯-೭೨). **ಪಳುವ**: ೧. ಈ ದಟ್ಟಪಳುವದಲಿ ಮುಕುಂದನಂ ಕರೆವರಾರ್? (ಚಂದ್ರಸ. ೩೬-೧೧). **ಪಳುವು**: ೧. ಪುರಹರಂ ಬ್ರಹ್ಮಾಂಡಕೊಡೆಯನಾದೊಡೆ ದಿಗಂಬರನಾಗಿ ಪಳುವಿನೊಳ್ ತಿರುಗಿದನದೇತಕೆ (ಅರಾಚ. ೩-೧೧-೪); ಕೋಪದಿಂದ ಪಳುವಿನೊಳಿಂತಿರಿಸಿ ಪೋದಂ (ಕಾಮಕ. ೨-೩೫). **ಪೞು$_1$**: ೧. "ಪೞುವೆಂದುಂ, ಬಿಂಜವೆಂದುಂ ಅಡವಿ" (ಕಶಸಾ. ೫೦-೮೧); ಈ ಪೞುವಿನೊಳೆನ್ನರಸನನಿಂತು ಬಿದಿಯೆ ತಂದಿಕ್ಕುವುದೇ (ಪಂಪಭಾ. ೨-೨೨); ಮಗಳೇ ನೀನಿಲ್ಲದೆ ಮನೆ ಬಗೆವಂದೆನಗಟ್ಟಿ ತಿಂಬ ಪೞುವಾದುದು (ಧರ್ಮಾಮೃ. ೩-೨೪೩); ಬಗೆಗೆ ಸುಖದುಃಖಮುಂ . . . ಪೞು ಪೊಟಿಲುಂ ಪಗೆ ಕೆಳೆಯುಂ ಸಮನೆನೆಯಾ ಯೋಗಿಗೆ ಸಮಕೆ ಸಮಂತು ಸಮನಿಸಿತ್ತು ಸಮಗ್ರಂ (ಪುಷ್ಪಪು. ೧೪-೧೭). **ಪೞುವು**: ೧. ಪೞುವಂ ಕಡಿದನೊಕ್ಕಲಿಗಂ (ಶಬ್ದಾನು. ೨೦೪ ಪ್ರಯೋ); ಕಿರ್ಚುಂ ಗಾಳಿಯುಮೊಂದೇ ಪೆರ್ಚುಗೆಯೊಳ್ ಬೆರಸಿ ಪೞುವಿನೊಣಗಿದಮರನಂ ಚುರ್ಚುವವೊಲ್ (ಚಿಕವಿ. ೨-೪೬). **ಹಳವು$_1$**: ೧. ಬಟಾಬಯಲು ಇದು, ಹೋ ಅಭಂಡ ತಾನರ್ಥಹೀನ ಹಳವು (ಅರಳು. ೧೯೫-೩); ಅಡವಿ, ಹಳವು, ಗಡ್ಡೆ (ಕಂನುಹು. ೮೬). **ಹಳಿವು$_2$**: ೧. ಆವ ಹೊಲದಲು ಹಳಿವ ಕಡಿದುತ್ತ ಹದಂ ಬೇಡೆಂದೆನಲಾಗದು (ಎಕ. XII, ತಿಪಟೂ. ೨-೧೭; 1263). **ಹಳು$_1$**: ೧. ಮಹಾಅರಣ್ಯವಾಗಿಯಿದ ಹಳುವನೂ (ಎಕ. VII, ತಿಸಮೊ. ೩೦-೩೧; 1413?); ಹೊಳೆಯ ಮಂಟಪದೊಳಗೆ ಕುಳಿತು ಹಳೆಯ ನೆನಪನು ಮನಕೆ ತಂದೆನು: ಹಳುವ ತುಂಬಿದ ಗೋಳ ಹೊಳಲನು, ಹರಿದ ಕಂಬನಿ ಕಾಲ್ವೆಯ (ಪಾಂಂದಳ. ೨೬-೭). ೨. ಒಂದು ಬಗೆಯ ಕಾಡುಗಿಡ: ವರ್ಷ ವರ್ಷವೂ ಹಳು ಹುಟ್ಟಿ ಬೆಳೆದು ಒಣಗಿ ಹೊದಿಸಿದ್ದ ಹೆಂಚುಗಳಲ್ಲಿ

ಅರೆಪಾಲು ಮುಚ್ಚಿ ಹೋಗಿದ್ದವು (ಮಲೆಸು. ೨೭). **ಹಳುವ:** ೧. ಹಳುವದಲಿ ಗಿರಿಶಿಖರದಲಿ ದಾವಾಗ್ನಿಮಧ್ಯದಲಿ ಸಿಲುಕಿದಡೆ ಬಿಡಿಸುವವಲೇ ಪ್ರತಿಫಲಿತ ಪೂರ್ವಾರ್ಜಿತಪುಣ್ಯಾವಳಿಗಳೆಂಬುದು ತನ್ನೊಳಾದುದು (ಕುಮ್ಮಾಗ. ೪-೨೫); ನಾನಾಹಳುವವನು ಬಳಸಿದರು ಬಂದರು (ತೊರರಾ. ೩-೧-೧೨); ರಘುವರಂ ಸೀತೆಯಂ ಹಳುವಕಟ್ಟಿದ ಬಳಿಕ ಪಿರಿದು ಕಕ್ಕುಲತೆಯಂ ತಳೆದು . . . ಕುಳ್ಳಿರ್ದನಂ (ಶೀಷರಾ. ೫-೧); ಅವನಿರುವ ಹಳುವ ನಗರೋಪವನನಂದನ (ಯಶೋಧ. ೫). **ಹಳುವು:** ೧. ಪಾಂಡವರು ಹಳುವಿನೊಳಗೆ ಹನ್ನೆರಡುವರುಷವಿರ್ದು ಬಳಿಕೆಲ್ಲಿಗೆಯ್ದಿದರು (ನೇಮಿಸಂ. ೨೫-೧೨೪); ಈ ದ್ವೀಪದ ಪೂರ್ವಭಾಗದಲ್ಲಿ . . . ದಟ್ಟವಾದ ಹಳುವುಗಳುಂಟು (ಮುಂಬಯಿ. ೪-೨೦೧); ಹಳುವು ಆಡೆ ಕರೆವುದು (ಮಾಂದಳಿ. ೪೫-೩). [ದೇ.॥ ತಮಿ. ಮಲ. ಪೞುವ]

**ಪೞುವಗಿಚ್ಚು** (ನಾ). ಕಾಡುಗಿಚ್ಚು; ದಾವಾಗ್ನಿ: "ಪೞುವ ಗಿಚ್ಚು ಕಾಯ್ಬುಚ್ಚೆನಿಪ್ಪುದು" (ಚತುನಿ. ೧೧೧). [ಪೞುವ + ಕಿಚ್ಚು]

**ಪೞುವಗೆ** (ನಾ). (ಆಲಂ) ಕಾಡುಬುದ್ಧಿ; ಕೆಟ್ಟಮನಸ್ಸು; ದುರ್ಬುದ್ಧಿ: ಆಕೆಯುವನ ಮನದ ಪೞುವಗೆಯನಱಿ[ಯು]ದಂತೆ ಗೆಯ್ವೆನೆಂದು (ಪಂಪಭಾ. ೮-೬೩ ವ); ಆನರಸುಗೆಯ್ವ ಪೞುವಗೆಯನದಂ ಪರಿಹರಿಸಿದೆಂ (ಪಂಪಭಾ. ೧೨-೧೨೯). [ಪೞು$_1$(< ಪೞುವ) + ಬಗೆ$_2$]

**ಪೞುವಡು** (ಕ್ರಿ). ಕಾಡನ್ನು ಸೇರು; ಅರಣ್ಯವನ್ನು ಹೊಗು: ದಶರಥಂ ತಪಂಬಟ್ಟುದುಮಂ ರಾಮಲಕ್ಷ್ಮಣರ್ ಪೞು[ಪಾಠಾಂ. ಟು] ವಟ್ಟುದುಮಂ ಚರವಚನದಿನಱಿದು (ಪಂರಾಮಾ. ೮-೫ ವ).
[ಪೞು$_1$(< ಪೞುವ) + ಪಡು$_1$]

**ಪೞುವೞಲ್** (ನಾ). ನಿರ್ಜನಪ್ರದೇಶದಲ್ಲಿ ಅಳುವ ಅಳು; ಅರಣ್ಯರೋದನ: ಆನೊರ್ವಳೆ ಬಡವೆ ಬಱುವೆಯಾದೆಂ. ಉಃ! ಪೋಕೆ ಪೞುವೞಲಿನೇಂ? (ರಾಮಾಶ್ವ. ೪೦-೬).
[ಪೞು$_1$(< ಪೞುವ) + ಅೞಲ್$_2$]

**ಪೞುವಟ್ಟೆ** (ನಾ). ಕಾಡುದಾರಿ; ಅರಣ್ಯಮಾರ್ಗ: ಪೞುವಟ್ಟೆಯಂ ತಗುಳ್ದಳುರ್ವ ಬೇಗೆವೊಲೆಚ್ಚ ಶರಾಳಿಗಳ್ ಛಟಿಲ್‌ಛಟಿಲೆನೆ ಪಾಯೆ (ಪಂಪಭಾ. ೮-೧೦೫). [ಪೞು$_1$(< ಪೞುವ) + ಬಟ್ಟೆ$_3$]

**ಪೞುವು** 'ಪೞುವ' ನೋ.

**ಪೞೆ** 'ಪೞಿ$_1$' ನೋ.

**ಪೞೆನರೆ** (ನಾ). (ಆಲಂ) ಹಳೆಯದು; ಪ್ರಾಚೀನವಾದುದು; ಪುರಾತನವಾದುದು: ಮಗಳುಮನ್ ಪೞೆನರೆಯ ವಿಧಿ ಬಡಿದು ನರಲಿಸಿತ್ತು (ಅಂತಿಗೊ. ೪೪-೯೧೧). [ಪೞೆ(< ಪೞಿದು) + ನರೆ$_2$]

**ಪೞೆನವಿರ್** 'ಪೞಿನವಿರ್' ನೋ.

**ಪೞೆಯ** 'ಪೞಿದು' ಪರಾ.

**ಪೞೆಯುಪ್ಪು** (ನಾ). ಬಹಳದಿನಗಳಿಂದ ಶೇಖರಿಸಿ ಹಳೆಯದಾದ ಉಪ್ಪು: "ವಸುವೆನಲ್ ಪೞೆಯುಪ್ಪೆನಿಕ್ಕು" (ಮಂಗರಾ. ೪೩-೪೧). [ಪೞೆ(< ಪೞಿದು) + ಉಪ್ಪು$_1$]

**ಪೞೆಯೆಲೆ** (ನಾ). ಹಳೆಯ ಎಲೆ; ಹಣ್ಣೆಲೆ: ಪೞೆಯೆಲೆ ದೋಷತ್ರಯಮಂ ಕಳೆವವ್ರೊಲೆಳೆಯೆಲೆ ಕಱಲ್ಚುವುದೆ (ಉದ್ಭಟ. ೧೦-೭೩).
[ಪೞೆ(< ಪೞಿದು) + ಎಲೆ$_1$]

**ಪೞೆಯೊಲ್ಮೆ** (ನಾ). ಹಳೆಯ ಪ್ರೀತಿ; ಹಿಂದಿನ ಒಲುಮೆ: ಪೞೆಯೊಲ್ಮೆಯನ್ ಬಿಸುಟನ್ (ಅಶ್ವತ್ಥ. ೩೨-೬೩೫).
[ಪೞೆ(< ಪೞಿದು$_1$) + ಒಲ್ಮೆ]

**ಪೞೆವುಣ್**, ಹಳೆಹುಣ್ಣು (ನಾ). ಹಳೆಯ ಗಾಯ: ಪವಿಯ ಮುಖಘಾತದಿಂ ಡೋಣಿವೋದ ಪೞೆವುಣ್ಗೆ ಜಿಗುಟೆಯಂ ಬಿಟ್ಟವೊಲ್ (ಸೂಕ್ತಿಸು. ೩-೮೦); ಪಲದೆವಸಕ್ಕೆ ಮಗೀಗಳ್ ಕಲಹಂ ದೊರೆಕೊಂಡುದಿಲ್ಲ ಮೆಱೆದಪವಿಂ ದೋರ್ವಲದಳವನೆಂದು ಪೞೆವು[ಪಾಠಾಂ. ಟವು]ಣ್ಗಲೆಯೊಡೆವಿನಮುರ್ವಿ ಕೊರ್ವಿದರ್ ಕಡುಗಲಿಗಳ್ (ಚಂದ್ರಪ್ರ. ೧೦-೬೨). **ಹಳೆಹುಣ್ಣು:** ಹಳೆಹುಣ್ಣಿಗೆ:—ಬೇವಿನ ಸೊಪ್ಪು, ಕಲುವು ಇವಂ ಅರೆದು ಬಿಸಿಮಾಡಿ ಕಟ್ಟಲು ಗುಣ (ವಿವೆ ವಿ. ೭೭).
[ಪೞೆ(< ಪೞಿದು) + ಪುಣ್]

**ಪೞೆವೆಣ್** (ನಾ). ಹಿರಿಯಳಾದ ಹೆಣ್ಣು; ಅನುಭವಸ್ಥಳಾದ ಹೆಂಗಸು: ಪೞೆವೆಣ್ಣಸಗುವ ತೆಱದಿನೆಸಗಲಾರ್ಪಳೆ ಪೊಸವೆಣ್ (ಉದ್ಭಟ. ೧೦-೭೪). [ಪೞೆ(< ಪೞಿದು) + ಪೆಣ್]

**ಪೞ್ಕು** (ಕ್ರಿ). (?): ಪದಪಾಕಕ್ಕೊಳಗಾಗೆ ಬಾಗಿಸಿದ ರಾಜಾನ್ನಾನ್ನದೊಳ್ ಘಾಸಿಯಾಗದುದಂ ಸಜ್ಜುಕವಾಲ ಘಟ್ಟವೊಸರಂ ತಂದಿಕ್ಕಿ ಪೞ್ಕೆತ್ತಿ ನುಗ್ಗಿದ ಕರ್ಗಾಯ್ . . . ಕಟ್ಟಿದುದಂ ಕಾಮಿನಿ ತಂದು ನೀಡೆ ಕಲಸುಂಗೂೞಿಂ ಕರಂ ರಾಗದಿಂ (ಮಹಾನೇ. ೧೬-೪೯). [?]

**ಪೞ್ಕೆ**, ಪಕ್ಕೆ$_1$, ಪಳ್ಕೆ, ಹಕ್ಕೆ (ನಾ). ೧. ಹಾಸುಗೆ; ಶಯ್ಯೆ: "ಪೞ್ಕೆ-ಶಯನಂ, ಶಯನಸ್ಥಾನಂ" (ಶಮದ. ಪು. ೧); ಈ ತಪೋಧನಂಗೆ ನಿವಾತಮಪ್ಪೆಡೆಯೊಳ್ ಪೞ್ಕೆಗೆಡೆಮಾಡಿ ಕುಡೆಂದು ಪೇೞ್ದು (ಪಂಚತಂ. ೭೩-೧೧); ನೀಹಾರಕರನಲಪಿ ಪೞ್ಕೆ[ಪಾಠಾಂ. ಕ್ಕೆ]ಗೆ ಸಾರಲೊಡಂ ಮಗುೞೆ ಮರ್ಬು ಪರ್ಬಿತ್ತಾಗಳ್ (ಲೀಲಾಪ. ೩-೯); ಮೇಲ್ವಾಯ್ದೆಂ ಪೞ್ಕೆಗುಯ್ದು ತೞ್ಕೈಸುವೆನೋ (ಚಕವಿ. ೬-೨೧೩). ೨. ಮಲಗುವ ಸ್ಥಳ; ವಿಶ್ರಮಿಸುವ ಜಾಗ: "ಪೞ್ಕೆಯೆನಲ್ ಶಯನ ಸ್ಥಲಾಹ್ವಯಂ" (ಕರ್ಣಾನಿ. ೭೪); "ಶಯನಮುಂ, ಶಯನದ ಉ[ಎ]ಡೆಯೊಳುಂ ಪೞ್ಕೆ" (ಸಂಜೀಪ. ೧೫). ೩. ನೆಲೆ; ಆಶ್ರಯಸ್ಥಾನ: ಠಕ್ಕಿನ ಪೞ್ಕೆ ಕಾಳೆಯ ತವರ್ ಕವಡಿಂಗೆಡೆ ... ಬೆಲೆವೆಣ್ಗಳ ಬೀದಿಯದೇಂ ಪೊದೞ್ದುದೋ (ಚಕವಿ. ೬-೭೪). ೪. ಹಕ್ಕಿಯ ಗೂಡು: ಬಱಿಯ ಗೂಡೊಳಗೆ ಮಱಿ ಕವರ್ದ ಪೞ್ಕೆಯನ್ ಕಂಡೊಡನೆ ಚೀಱ್ವಂತೆ ಚೀಱ್ದಳ್ (ಅಂತಿಗೊ. ೨೦-೪೧೨). **ಪಕ್ಕೆ$_1$:** ೧. "ಪಕ್ಕೆಯೆನೆ ಶಯನಮುಕ್ಕುಂ" (ಕವಿಕಂ. ೧೪೬); ಉದಯಾದ್ರಿಯ ಸೆಜ್ಜರಕ್ಕೆ ಪಕ್ಕೆಗೆ ಬರುತಿರ್ಪ ದೇವಗಜದಂಗಮರೀಚಿಯ ಭಂಗಿವೆತ್ತಿರಲ್ ಬಗೆಗೊಳಿಸಿತ್ತು ಚಂದನರಸಂದೊಡೆದಂದದೆ ಪೂರ್ವದಿಙ್ಮುಖಂ (ಜಗವಿ. ೧೬-೧೦೩); ತುಱುಗಿದ ತನುತಾಪದಿಂದೆ ಪಕ್ಕೆಯ ತಳಿರ್ ತಱಗೆಲೆಯಾಗಿ ತೋಱಿಸಲು (ಮೋಹಕ. ೨೮-೧೬). ೨. "ಶಯ್ಯೆ ಮನೆಗಳೊಳ್ ಪಕ್ಕೆ" (ಶಬ್ದಮಂ. ೮೦). ೩. ಇದೆ ಸರ್ವಮೃಗಪಕ್ಷಿಗಳ ಪಕ್ಕೆಯೆಂದು . . . ಬೇಂಟೆಯಾಡುತ್ತಿರ್ದಂ (ಭಾಪಚಂ. ೫-೧೦); ವಿಪುಳಧರ್ಮಾವಾಸ ವಿಪುಳಪುಣ್ಯದ ಪಕ್ಕೆ (ತ್ರಿಭುತಿ. ೨-೧೧). ೪. ಅಳ್ಳೞೊಳೆ ಪಕ್ಕೆಗೆ ಸಾರ್ವ ವಿಹಂಗವೀಥಿ ಚೀತರಿಸುವ ಮಾರುತಂ ನಸುಕಲಂಕುವ ಸಾಂಧ್ಯಮಯೂಖಲೇಖೆಗಳ್ (೧೨ಕ. ೪-೬೬); ತಾಳಿತು ಕೆಂಪನಪರದಿಕ್ಕು ಪಕ್ಷಿಜಾಲ ಪಕ್ಕೆಗೆ ಸಾರಿದವು (ಜೀಪಂಸಾಂ. ೫-೨); ಪಜ್ಜಳಿಸೆ ಪಡುಗೆಂಪು ಪಕ್ಕಿ ಪಕ್ಕೆಗೆ ಸಾರೆ (ಸಮ್ಯಕೌ. ೧-೩೭). ೫. ಮೃಗಗಳ ವಾಸಸ್ಥಾನ; ಪ್ರಾಣಿಗಳ ಇಕ್ಕೆ: ಮೃಗಮುಂ ಗಾಳಿಯುನಿರ್ಕೆಯುಂ ಪಕ್ಕೆಯುಂ . . . ಎಲ್ಲಂಡದಿಂ ಬಗೆದಾಗಳ್ (ಪಂಪಭಾ. ೫-೪೩). **ಪಳ್ಕೆ:** ೧. ಕಸವರದ ತೃಷೆಯಿಂದೆ ಚಂಡಾಲರಾದೊಡಂ ಮಿಸುಪ ಪಳ್ಕೆಗೆ ಕರೆವರವಿಚಾರಿಗಳ್ (ಅರಾಚ. ೨-೫-೪೦). 'ಪಳ್ಕೆವನೆ' ಪರಾ. **ಹಕ್ಕೆ:** ೧. ತೊಡುವುದಾದೊಡೆ ಭೂತಿ ಹಕ್ಕೆಯ[ಪಾಠಾಂ. ಮಲಗುವ] ಹಾಸ ನೋಡಿದೊಡೆ ಕಡವಸಗಳಿಹ ವಾಸವಾದೊಡೆಯುಡವಿಯು (ಪ್ರಭುಲೀ. ೨೦-೩೦). ೩. "ಇಕ್ಕೆ . . . ಹಕ್ಕೆ, ಗಡಿ, ಗರುಡಿ, ಆಗರಂ—ಈ ೧೫ ಆಶ್ರಯಕ್ಕೆ ಪೆಸರ್" (ಕಶಸಾ. ೫೯-೨೯೦); ಹರನ ಹರುಷದ ಹಕ್ಕೆ ಪರಮೇಶ್ವರನ ಪರಿಣಾಮದ ಪಸರ

(ಪ್ರಭುಲೀ. ೨-೨೩) ; ದುರ್ನೀತಿಯ ಹಕ್ಕೆ ಹಾಸ್ಯದ ಹೊಲಂ . . . ಗಣಿಕಾಪ್ರತೋಳಿ ತಾಂ (ಹವಿಸ್ಮಾರ. ೨-೯೨) ; ಹದಿರ್ ಚದುರುಗಳ ಹಕ್ಕೆ ಮೋಹನದಿಕ್ಕೆಯೆನಿಪ ವೇಶ್ಯಾಶ್ರಯಂ ಮುಂದೆ ಕಡುಚೆಲ್ವಾದುದು (ಚೆಬಪು. ೧೧-೩೭). ೪. ಹಕ್ಕೆಯಿಂದಗಲ್ವ ಚಕ್ರಂ ಹೂವನಪಿಸುವಳಿ . . . ನಲಿವ ಜಾರೆಯರು ಸಂಜೆಯೊಳು ರಂಜಿಸಿದರು (ಹಚರಾ. ೩-೭೭). ೫. ಕೇಳಿದನು ಮೃಗದಿಕ್ಕೆ ಹಕ್ಕೆಯ ಗಾಳಿಯನು (ಕುಮ್ಯಾಅ. ೪-೧೨) ; ಹಕ್ಕೆಗೆಯ್ದಿದವು ಹಲ ಮಿಗಗಳ್ (ಸಮ್ಯಕೌ. ೧೦-೨೪) ; ಇತ್ತಲಿದೆ ಹುಲ್ಲೆಗಳ ಹಕ್ಕೆ ; ಮರಿಗಳಿಕ್ಕೆ (ಚಂದ್ರಸ. ೨೮-೧೦) ; ಮೃಗಗಳನ್ನು ಬೆಂಬತ್ತಿ ಅವುಗಳ ಹಕ್ಕೆಗಳನ್ನು ಕಂಡುಹಿಡಿದೆನು (ಮಣಿಸ. ೨೨). ೬. ದನಕರುಗಳನ್ನು ಕಟ್ಟುವ ಸ್ಥಳ; ಕೊಟ್ಟಿಗೆ; ದೊಡ್ಡಿ : "ಹಕ್ಕೆಯೆನಲ್ ಮೃಗಾಲಯದೊಳಪ್ಪುದು" (ಕರ್ಣಾನಿ. ೫೦) ; ಒಕ್ಕಲಿಗನ ಮನೆಯಲ್ಲಿ ದನದ ಹಕ್ಕೆಯೊಳಗೆ . . . ಅಡಗಿಕೊಂಡಿತು (ಮುಂಬಯಿ. ೪-೪೨) ; ಹಕ್ಕೆಯನ್ನು ಬಳಿದು ಹಸ ಮಾಡಿದಳು (ಎರಸೆ. ೫೮).

[<ಪಡು$_1$./ತುಳು. ಪರ್ಕೆ ; ತೆಲು. ಪಕ್ಕ]

**ಪೞ್ಕೆಗೆಡು** (ಕ್ರಿ). ಆಶ್ರಯ ತಪ್ಪು ; ನೆಲೆಯಿಲ್ಲದಾಗು : ಢಗೆವೊಯ್ದಿರಲೆಯು, ಪೞ್ಕೆಗೆಟ್ಟ ನರಿಯು . . . ಗಜಬಜದ ಸಂಚಾರಂ ಬಲ್ಪಿರಿದಾಯ್ತು (ರಾಮಾಶ್ವ. ೮೪-೮). [ಪೞ್ಕೆ + ಕೆಡು$_1$]

**ಪೞ್ಕೆಗೆಯ್** (ಕ್ರಿ). ಮಲಗು ; ವಿಶ್ರಮಿಸು : ನಿನ್ನ ಕುಚಮಧ್ಯದೊಳೊಯ್ಯನೆ ಪೞ್ಕೆಗೆಯ್ದು ನಾನೆಳಸಿ ಸುಖಂಗಳಂ ಸವಿವ ಕಾಲಮದೆಂದೆನಗಪ್ಪುದಂಗನೇ (ಕಾವ್ಯಸಾ. ೫೭೫). [ಪೞ್ಕೆ + ಕೆಯ್$_1$]

**ಪೞ್ಕೆತೞ್ಕೈಸು ?** (ಕ್ರಿ). ಗಾಢವಾಗಿ ಅಪ್ಪು ; ಬರಸೆಳೆ (?) : "ಪೞ್ಕೆತೞ್ಕೈಸಿದಂ= ತಡಕಯ್ಯಂ ಮಾಡಿದಂ" (ಶಮದ. ಪರಿ. ೧) ; ಪೞ್ಕೆತೞ್ಕೈಸಿದನೆಂಬಲ್ಲಿ ತಡಕೈಯಂ ಮಾಡಿದನೆಂಬರ್ಥಂ (ಶಮದ. ೧೯ ಪ್ರಯೋ). [ಪೞ್ಕೆ ? + ತೞ್ಕೈಸು]

**ಪೞ್ಕೆವನೆ,** ಪಕ್ಕೆವನೆ, ಪಳ್ಕೆವನೆ (ನಾ). ಮಲಗುವ ಮನೆ ; ಶಯ್ಯಾಗೃಹ : "ಸೆಜ್ಜೆವನೆ, ಪೞ್ಕೆವನೆ—ಈ ೨ ಶಯ್ಯಾಗೃಹಂ" (ಕಶಸಾ. ೬೦-೩೧೭) ; ಬೆಳಗಪ್ಪ ಸಮಯದೆಯೆೞ್ದೊಯ್ಯನೆ ಪೞ್ಕೆವನೆಯಂ ಪೊಱಮಟ್ಟು (ಉದ್ಭಟ. ೧೦-೧೩೬ ವ). **ಪಕ್ಕೆವನೆ :** "ಪಕ್ಕೆವನೆಯೆನ್ನಲದು ತಾನಕ್ಕು ಶಯ್ಯಾಗೃಹಕ್ಕೆ ನಾಮಂ" (ಕವಿಕಂ. ೧೪೬); ಪಕ್ಕೆವನೆಗಾಗಿ ನಡೆತಂದಳು ರಾಯನ ರಾಣಿ (ಸೊಬಸೋ. ೨-೮) ; ಪಕ್ಕೆವನೆಗೆ ನಡೆತಂದಳಂಜನೆದೇವಿ (ಅಂಜಚ. ೮-೮೧). **ಪಳ್ಕೆವನೆ :** ಕೈವಿಡಿದವನಂ ಪಳ್ಕೆವನೆಗವಳ್ಕೊಂಡೊಯ್ದಳ್ (ವೀರವಿ. ೬-೬೭). [ಪೞ್ಕೆ+ಮನೆ]

**ಪೞ್ಕೆವೆಟ್ಟು,** ಪಕ್ಕೆವೆಟ್ಟ, ಪಕ್ಕೆವೆಟ್ಟು (ನಾ). ಸೂರ್ಯನು ವಿಶ್ರಮಿಸುವ ಬೆಟ್ಟ ; ಪಶ್ಚಿಮಬೆಟ್ಟ ; ಪಡುವೆಟ್ಟ : ಪೊಂಬಿಸಿಲಾದುದು ಪೊರ್ದೆ ಪೞ್ಕೆವೆಟ್ಟಮ[ಪಾಠಾಂ. ಪಕ್ಷವೇದಿಯ]ನರ್ಕಂ (ಪಂಪರಾಮಾ. ೧೧-೧೬೭). **ಪಕ್ಕೆವೆಟ್ಟ :** ನಭೋಲಕ್ಷ್ಮಿ ಸಕಳಪ್ರಕಾಶವಂ ಮೊಟ್ಟೆಗಟ್ಟಿ ಪಕ್ಕೆವೆಟ್ಟದಿಟ್ಟೆಡೆಗೆ ಕಳಿಪಿದ ಕಟ್ಟೇವದ ಪೊಟ್ಟಳಮೆಂದೆಂಬಿನಂ ದ್ಯುಮಣಿ ಚರಮಾಚಳಶಿರೋಮಣಿಯಪ್ಪುದುಂ (ಪರ್ಶ್ವಪು. ೬-೨೩ ವ) ; ಚೆಂಗೊಡೆಯಂತಿರ್ದುವು ಪಕ್ಕೆವೆಟ್ಟದೆಡೆಯೊಳ್ ನೀಹಾರರುಚ್ಯಂಡಲಂ (ಸೂಕ್ತಿಸು. ೯-೧೨). **ಪಕ್ಕೆವೆಟ್ಟು :** ಅಂತು ಕಾದಿ ಕಡೆಗಾಲದ ಬಱಸಿಡಿಲ ಬಳಗದೊಳ್ ತೊಡರ್ದ ಪಕ್ಕೆವೆಟ್ಟುಗಳ ತೞ್ಕೈಯಂತೆಯುಂ (ಚಂದ್ರಪ್ರ. ೧೦-೮೭ ವ). [ಪೞ್ಕೆ + ಬೆಟ್ಟ]

**ಪೞ್ಕೆಸಾರ್** (ಕ್ರಿ). ಹಾಸುಗೆಯನ್ನು ಸೇರು ; ಮಲಗು : ನಿದ್ರಾತುರನಾಗಿ ಪೞ್ಕೆ[ಪಾಠಾಂ. ಕ್ಕೆ]ಸಾರ್ವಂತಿರೆ ಸಾರ್ದಂ ಚಂದ್ರನಪವೇಲಾವನಮಂ (ಕಾದಂಬ. ೧೭೧). [ಪೞ್ಕೆ + ಸಾರ್]

**ಪೞ್ಗ,** ಹೞ್ಗ (ನಾ). ಹಣ್ಣಿಗೆ ಬಂದ ಕಾಯಿಗಳನ್ನು ಹೊಗೆ ಹಾಕಿ ಹಣ್ಣು ಮಾಡುವುದು,—ಅಡೆಹಾಕುವುದು,—ಮಾಗಿಸುವುದು : (ಕಿ). **ಹೞ್ಗ :** "ಹೞ್ಗ=ದೂಪೆಯೊಳ್ ತಬಲಂ ಪೂೞ್ದ ಕ್ರಿಯೆ" (ಶಮದ. ಪರಿ. ೧). ☞ ಈ ಶಬ್ದರೂಪಗಳ ಬಗೆಗೆ ಸಿದ್ಧವಾದ ಅಭಿಪ್ರಾಯವಿಲ್ಲ. [ ? ]

△ **ಪೞ್ಚು** 'ಪರ್ಚು$_1$' ನೋ.

**ಪೞ್ತಿ,** ಪತ್ತಿ$_1$, ಪರ್ತಿ, ಪಳ್ತಿ, ಹತ್ತಿ$_1$ (ನಾ). (ಬೀಜಸಹಿತವಾದ) ಅರಳೆ; ಕಾರ್ಪಾಸ ; ತೂಲ : "ಪಿಚವ್ಯಃ, ಬಾದರಃ, ಕಾರ್ಪಾಸಃ—ಈ ೩ ಪೞ್ತಿ (ಹತ್ತಿ)" (ಹಲಾಯು. ೩೪-೪೯) ; ಮಳವೆಗೆ ಪೞ್ತಿ ಪದಿನಾಱು ಪಲಂ (ಎಇ. IX, ೨೨-೭ ; 800) ; ಬಂಡಿಗಳೊಳ್ ಪೞ್ತಿ[ಪಾಠಾಂ. ತ್ತಿ]ಯುಂ ಧಾನ್ಯಮಂ ತೀವಿಕೊಂಡು ಪೊೞಲ್ಗೆ ಮಾಱಲೆಂದು ಪೋಪನ್ನೆಗಂ (ವಡ್ಡಾರಾ. ೭೬-೧೧) ; ಕಪ್ಪಡಕ್ಕೆ ಪೞ್ತಿಯುಂ ಬ್ರಹ್ಮಲಿಂಗಭಟರ್ಗೆ ಕೊಟ್ಟುದು (ಮೈಆರಿ. ೧೯೪೬, ೨೮-೧೯ ; 1032). **ಪತ್ತಿ$_1$ :** ಪತ್ತಿಯಂ ಕಿಚ್ಚು ತಗುಳ್ದಂತೆ (ಧರ್ಮಾಮೃ. ೨-೭೧) ; ನಾಡೆಯುಂ ನೂಲುಂ ಪತ್ತಿಯುಮಂ ಸಂಗ್ರಹಂಗೆಯ್ದು (ಬಂಹರಿ. ೪-೧೦ ಪ) ; ಪತ್ತಿಸುವನಜ್ಞಾನಮಾರ್ಗದ ಪತ್ತಿಯಂ (ಶಂಕದಾ. ೪-೩೧). **ಪರ್ತಿ :** ಒಕ್ಕಲು ಪಣಂ ಮೂಱು ಪರ್ತಿಯ ಮಳವೆ ಪನ್ನೆರಡು ಇನ್ನಿನಿತುಮಂ ಪರಿಪಪ್ರತಿ ಬಿಟ್ಟರ್ (ಎಇ. XVI, ೩೩೧-೨೧ ; 1077). **ಪಳ್ತಿ :** ಮಱಿವೊಕ್ಕ ಬಳಿಕೆ ಕಲ್ಪಮಡುಱುವೆಂಬುದು ಪಳ್ತಿಯೊಟ್ಟಲಗ್ನಿಯ ತೆಱದಿಂತುಱಿ ಬೞಿದಪ್ಪುದು (ವಿಷ್ಣುಪು. ೧-೨-೧೭೫) ; ಕಿರ್ಚು ಪಳ್ತಿಯ ರಾಸಿಯಂ ದಹಿಸಿ ಬಿಡುವಂತೆ (ಭಾರಶಾಂ. ೧-೪). **ಹತ್ತಿ$_1$ :** "ಹತ್ತಿ ಕಾರ್ಪಾಸಂ ಪಿಚವ್ಯಮಾ ಬಾದರಂ ಅರಳೆ ಪಿಚು ತೂಳಕಾಖ್ಯಂ" (ಮಂಗರಾ. ೩೮-೨೬) ; ಸಲುವುದು ಹತ್ತಿಯಡಕೆಯೆಲೆ (ಎಕ. VIII, ಸೊರಬ. ೩೨೮-೬೨ ; 1159) ; ಧರಣಿ ಹತ್ತಿಯ ಶಯನದಂದದಿ ವರಮುನಿಗೆ ತಾನಾಗೆ (ಕುಮ್ಯಾಅ. ೨೫-೨೪) · ಎಡೆಗೆಡೆಗೆ ಹತ್ತಿಗಳ ಹೊಱಗಳ ಹೊಡಚಿದರಳೆಯ ಸುತ್ತಿದರು (ತೊರರಾ. ೫-೮-೮) ; ಹತ್ತಿ ತೂಗುವಲ್ಲಿ ನೊಣಕ್ಕೆ ಉಪವಾಸ (ಗಾದೆ).

[ದೇ.॥ ತಮಿ. ಮಲ. ಪರುತ್ತಿ ; ತುಳು. ಕುಇ. ಕುವಿ. ಪರ್ತಿ : ತೆಲು. ಪತ್ತಿ, ಪ್ರತ್ತಿ ; ಕೊಡ. ಪರತಿ]

**ಪೞ್ತಿಂಗೞ್** (ನಾ). (?) : ಒನ್ದಡಿ ಪಾನಿಯೆಂ ಏೞುಂ ಒನ್ಪತ್ತಿ ದಿವಸಂ ಪೞ್ತಿಂ ಗೞ್ ತಪುಸಿ ಮೂಱಿ ದಿವಸಂ ವೇಸನೆ ಈ ××× ರೆ ಉೞ್ಪಿದು (ಎಕ. III, ಮೈಸೂರು. ೫೫-೮ ; ಸು. 740). [ ? ]

**ಪೞ್ತಿಯುಮೞ್ತ್ರವುರ,** ಪತ್ತಿಯುಮತ್ತಉರ (ನಾ). ಒಂದು ಊರಿನ ಹೆಸರು ; ☞ ಈಗಿನ ಧಾರವಾಡ ಜಿಲ್ಲೆಯ ಹತ್ತಿಮತ್ತೂರು : ಪೞ್ತಿಯುಮೞ್ತ್ರವುರದ ನೂಱ್ಪ್ಪರ್ದಿವ್ಬೊರುಮೞ್ದು ದಯೆಗೆಯ್ಯ ಕಚ್ಚವರ ಕಾದಮ್ಮನ ಮತವುರಂ ಬಿಡಿಸಿದೊಂ (ಇಆ. XII, ೨೨೫-೮ ; 916). **ಪತ್ತಿಯುಮತ್ತಉರ :** ಪತ್ತಿಯುಮತ್ತಉರದ ದಂಡಿನೊಳು ಕಿಱಿಯ ಸಿರಿಉರದ ಸಾಯಿರಮತ್ತರ್ ಪೊಲನಂ (ಎಇ. III, ೨೩೪-೪೫ ; ಸು. 1070). [ಪೞ್ತಿ + ? + ಪುರ$_2$]

**ಪೞ್ದಲ** 'ಪರ್ದಿಲ' ನೋ.

**ಪೞ್ಪಟ** 'ಪಟಪಟ' ನೋ.

**ಪೞ್ಪಟನೆ** 'ಪಟಪಟನೆ' ನೋ.

ಕರ್ನಾಟಕ ಸರ್ಕಾರದ ಉದಾರ ಧನಸಹಾಯದಿಂದ ಕನ್ನಡಿಗರ ಬಹುದಿನಗಳ ಬೇಡಿಕೆಯಾಗಿದ್ದ ಕನ್ನಡ ನಿಘಂಟಿನ ಎಂಟು ಸಂಪುಟಗಳು ಈಗ ಪುನರ್ಮುದ್ರಣಗೊಂಡು ನಿಮ್ಮ ಕೈಸೇರುತ್ತಿವೆ.

ಸಮಸ್ತ ಕನ್ನಡಿಗರಿಗೆ ಈ ಸಂಪುಟಗಳನ್ನು ಒಪ್ಪಿಸಲು ನೆರವು ನೀಡಿದ ಕರ್ನಾಟಕ ಸರ್ಕಾರವನ್ನು ನಾನು ಕೃತಜ್ಞತಾಪೂರ್ವಕವಾಗಿ ಸ್ಮರಿಸುತ್ತೇನೆ.

ಡಾ. ನಲ್ಲೂರು ಪ್ರಸಾದ್ ಆರ್. ಕೆ.

ಅಧ್ಯಕ್ಷರು

ಕನ್ನಡ ಸಾಹಿತ್ಯ ಪರಿಷತ್ತು